## ಎಂ. ಜಿ. ವೆಂಕಟೇಶಯ್ಯನವರ

ಇತರ ಪುಸ್ತಕಗಳು

---

| | | |
|---|---|---|
| ಪುಲ್ಲಯ್ಯನ ಪ್ರಬಂಧಗಳು ಸಾಧಾರಣ ಪ್ರತಿ ಬೆಲೆ | | ೨ ಆಣೆ. |
| ಉತ್ತಮ ಪ್ರತಿ | ,, | ೮ ಆಣೆ. |
| ಮಗೂ ಮದುವೆ | ,, | ೧ ಆಣೆ. |
| ಜಿಪುಣ | ,, | ೪ ಆಣೆ. |
| ನಗು | ,, | ೬ ಆಣೆ. |

ಹಾಸ್ಯತೋಪಸಿಪತ್ತು (ಅಚ್ಚಿನಲ್ಲಿದೆ)

---

## ಸೂರ್ಯಭೇದನ ವ್ಯಾಯಾಮ

**ಮಾಲೂರು ಗುಂಡಪ್ಪ, ಬಿ. ಎ., ಯವರಿಂದ**

ಕನ್ನಡದಲ್ಲಿ ತರ್ಜುಮೆ ಮಾಡಲ್ಪಟ್ಟದ್ದು ೮ ಆಣೆ ಮಾತ್ರ.

---

ಇನ್ನೂ ಇತರ ಕನ್ನಡ ಪುಸ್ತಕಗಳಿಗೆ ನಮಗೆ ಬರೆಯಿರಿ.

**ರಾಮಮೋಹನ ಕಂಪೆನಿ,**

ಬಳೇಪೇಟೆ,

ಬೆಂಗಳೂರು ಸಿಟಿ.

# ಕಾಸಿನಸರ

(ಕೆಲವು ಸಣ್ಣ ಕಥೆಗಳು)

ಎಂ. ಜಿ. ವೆಂಕಟೇಶಯ್ಯ, ಎಂ. ಎ.,

1952.

ಬೆಲೆ ೬ ಆಣೆ.

ಶ್ರೀ ಗೌರೀಶಂಕರ ಮುದ್ರಣಾಲಯ, ಬೆಂಗಳೂರು ಸಿಟಿ.

# ಎರಡುಮಾತು.

---

ಈ ಸಣ್ಣ ಕತೆಗಳಿಗೆ ಆಂಗ್ಲೇಯ ಭಾಷೆಯಲ್ಲಿರುವ ಕೆಲವು ಕತೆಗಳೇ ಮೂಲ. ಪ್ರತಿಯೊಂದು ಕತೆಗೂ ಇಂತಹದೇ ಮೂಲವೆಂದು ಇಲ್ಲಿ ಹೇಳದೇ ಇದ್ದಾಗ್ಯೂ, ಒಟ್ಟಿನಲ್ಲಿ ಆ ಋಣವನ್ನು ಇಲ್ಲಿ ಒಪ್ಪಿಕೊಂಡಿರುತ್ತೇನೆ.

ಇವುಗಳಿಗೆ ತಮ್ಮ ಪತ್ರಿಕೆಗಳಲ್ಲಿ ಸ್ಥಳವಿತ್ತು ಬೆಂಬಲ ಕೊಟ್ಟ ಪತ್ರಿಕಾಸಂಪಾದಕರಿಗೆ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಈ ಮೂಲಕ ಅರ್ಪಿಸುತ್ತೇನೆ. ಈ ಕವಳಿಗೆಯು ಅಚ್ಚಾಗುತ್ತಿದ್ದ ಕಾಲದಲ್ಲಿ ನನಗೆ ಸಹಾಯ ಮಾಡಿರುವ ನನ್ನ ಮಿತ್ರರಿಗೂ, ಇದರ ಮುದ್ರಣವನ್ನು ಕೈಗೊಂಡು ಅಚ್ಚುಮೆಚ್ಚಾಗಿ ಮಾಡಿರುವ ಮ॥ ರಾ॥ ಬಿ. ಶಿವಪ್ಪನವರಿಗೂ, ನನ್ನ ಧನ್ಯವಾದಗಳು ಸಲ್ಲತಕ್ಕದ್ದಾಗಿವೆ.

ಎಂ. ಜಿ. ವಿ.

# ಭೂತದರ್ಶನ.

---




ಮ್ಮ ಚಿಕ್ಕಪ್ಪ ತೆಳ್ಳಗೆ ಸಣ್ಣಗಿದ್ದರೂ, ನಮ್ಮ ಚಿಕ್ಕಮ್ಮ ಸಾಧಾರಣದವಳಲ್ಲ. ಅವಳನ್ನು ಮದುವೆಮಾಡಿಕೊಂಡಲಾಗಾಯ್ತು ದಿನೇದಿನೇ ಆತ ಇಳಿಯುತ್ತಲೇ ಬಂದ; ಎಷ್ಟು ಸೇವೆ ಚಿಕ್ಕಮ್ಮ ಮಾಡಿದರೂ ಕೊನೆಗೆ ಹಾಸಿಗೆ ಹತ್ತಿ ಮಲಗೇ ಮಲಗಿದ.

ಪಕ್ಕದಮನೆ ರಾಮರಾಯರು ಜಾತಕನೋಡಿ ಮನೆಬಿಟ್ಟ ಹೊರತು ಚಿಕ್ಕಪ್ಪನಿಗೆ ವಾಸಿಯಾಗೊಲ್ಲ—ಎಂದರು. ಇದ್ದಕ್ಕಿದ್ದಹಾಗೆ ಕಲ್ಯಾಣಪುರಿಯಲ್ಲಿ ಮನೆ ಸಿಗುತ್ತೆಯೇ? ಅದರೊಳಗೆ ಬಾಯಿಲೆ ಮನುಷ್ಯನ್ನ ತರುತ್ತಾರೆಂದರೆ!—

ಹಾಗೂ ಹೀಗೂ ಅಲ್ಲಿ ಇಲ್ಲಿ ಹುಡುಕಿ ಕೊನೆಗೆ ಬಸವನಪುರದ ಕೊನೆಯಲ್ಲಿ ಒಂದು ಮನೆ ಸಿಕ್ಕಿತು. ಸುತ್ತಮುತ್ತಲಿದ್ದೋರು "ಅದು 'ಗಾಳಿ' ಮನೆ; ಮನೆಯಜವಾನರು ಅಲ್ಲಿ ಪಿಶಾಚಿಯಾಗಿದ್ದಾರೆ" ಹೀಗೆಲ್ಲಾ ಅಂದರು. ಇನ್ನಿದನ್ನು ನಮ್ಮ ಚಿಕ್ಕಪ್ಪನ ಮುಂದೆ ಹೇಳಿದರೆ ಕಷ್ಟ, ಹೇಳದೆ ಇರೋಣವೆಂದರೆ ನನಗೇ ಹೆದರಿಕೆ. ಚಿಕ್ಕಮ್ಮನ ಮುಂದೆ ಯಾವ ಪಿಶಾಚಿ ನಿಲ್ಲುತ್ತೆ! ನನ್ನ ಮನಸ್ಸಿನಲ್ಲೇ ಹೀಗೆಂದುಕೊಂಡು ಸುಮ್ಮನಾದೆ.

## 2

ಮನೆ ಸಿಕ್ಕಿದ್ದು ಚಿಕ್ಕಮ್ಮನಿಗೂ ಬಹಳ ಸಂತೋಷವಾಯಿತು. ಒಂದು ಮಧ್ಯಾಹ್ನದಲ್ಲಿ ಸಾಮಾನನ್ನೆಲ್ಲಾ ಸಾಗಿಸಿಬಿಟ್ಟೆವು. ಜಟಕಾ ಗಾಡಿಯವರ ಜೊತೆಯಲ್ಲಿ ವ್ಯಾಜ್ಯವೂ ಆಯಿತು. ಗಾಡಿಯಿಂದೋರು ಇಡತಾರೆ. ಇನ್ನೂ ಸ್ವಲ್ಪ ದೊಡ್ಡದಾಗಿ ಇಡಬಾರದೆ! ಚಿಕ್ಕಮ್ಮನ್ನ ಗಾಡೀಲಿ 'ತುರಕ' ಬೇಕಾಯಿತು! ಒಬ್ಬೊಬ್ಬರಿಗೆ ಒಂದೊಂದು ಗಾಡಿ ಮಾಡೋದಕ್ಕೆ ಸಾಧ್ಯವೇ?

ಕಸಮುಸರೆ ಮಾಡುವುದಕ್ಕೆ ಆಳುಗಳು ಸಿಗುವುದು ಕಷ್ಟವಾ ಯಿತು. ಕೊನೆಗೆ ಬೆಳಿಗ್ಗೆ ಬಂದು ಕೆಲಸ ಮಾಡುವುದಕ್ಕೊಪ್ಪಿದರು. ಆದರೆ ರಾತ್ರಿ ಇರಬೇಕೆಂದರೆ— ಕೆಲಸಕ್ಕೇ ಬರುವುದು ಅನುಮಾನ! ಆ ಮನೆ ಹಿಂದಿದ್ದ ಮಾವಿನತೋಪು ಕಾಯುವವನು ಮಾತ್ರ ಬರು ತ್ತೇನೆಂದು ಒಪ್ಪಿದ. ಆದರೆ ತಾತಯ್ಯ ಮುದುಕ, ಕಣ್ಣು ಸ್ವಲ್ಪ ಮಂಜು, ಕಿವಿ ಸ್ವಲ್ಪ ಹಾಗೆ ಹಾಗೇ. ಯಾರೋ ಒಬ್ಬರು ಜೊತೇಲಿ ಮನುಷ್ಯರು ಎಂದಿದ್ದರೆ ಸರಿ.

ಎರಡು ಮೂರು ದಿನಗಳಲ್ಲಿ ಎಲ್ಲಾ ಒಂದು ದಾರಿಗೆ ಬಂತು. ಯಾವ ಯಾವ ಸಾಮಾನು ಎಲ್ಲೆಲ್ಲಿರಬೇಕೋ, ಯಾರು ಯಾರು ಯಾವ ಯಾವ ಚಿಕ್ಕಮನೆ ಸ್ವಾಧೀನ ಮಾಡಿಕೋಬೇಕೋ ಎಲ್ಲಾ ವ್ಯವಸ್ಥೆಯಾಯಿತು. ನನಗಾದರೂ ಪೇಟೆ ಮನೆಯಿಂದ ಈ ದೊಡ್ಡ ಮನೆಗೆ ಬಂದಿದ್ದು ಜೈಲಿನಲ್ಲಿದ್ದಂತೇ ಇತ್ತು. ಆ ಮನೆ ಬಾಗಲಷ್ಟು ಈ ಮನೆ ಕಿಟಕಿಗಳು! ಗಾಳಿ, ಬೆಳಕು ಬೇಕಾದ ಹಾಗಿತ್ತು. ರಾತ್ರಿ ಯಾದರೆ ಅವರು ಇವರು ಹೇಳಿದ್ದೆಲ್ಲಾ ಜ್ಞಾಪಕಕ್ಕೆ ಬರುತ್ತಿತ್ತು. ನಾನೋ ಭಯವಾದಕೂಡಲೇ ಹಾಸಿಗೆ ಮೇಲೆ ಮಲಗೋದು,

ಮಗ್ಗಲು ಹಾಸಿಗೆ-ಕಂಬಳಿ ಎಲ್ಲಾ ಸೇರಿಸಿ ತಲೆತುಂಬ ಹೊದ್ದುಕೊಂಡು ಬಿಡೋದು, ಹಾಗೇ ನಿದ್ದೆ ಹೋಗಿಬಿಡೋದ.—ಅಷ್ಟೆ!

ರಾತ್ರಿ ಹತ್ತೂವರೆ ಹನ್ನೊಂದಿರಬಹುದು. ಚಿಕ್ಕಪ್ಪನಿಗೆ ಸುಮಾರಾಗಿ ನಿದ್ದೆಹತ್ತಿತ್ತು. ಊರಿಂದ ತೋಟದ ಹಣ ಬಂದಿತ್ತು; ಚಿಕ್ಕಮ್ಮ, ನಾನೂ ಎಣಿಸುತ್ತಾ ಇದ್ದೆವು ಕಬ್ಬಿಣದಪೆಟ್ಟಿಗೆ ಬಾಗಿಲು ತೆರೆದಿತ್ತು. ಅದರಮೇಲೆ ದೊಡ್ಡದೊಂದು ಕನ್ನಡಿ. ಎಣಿಸುತ್ತಾ ಎಣಿಸುತ್ತಾ ಆ ಪೆಟ್ಟಿಗೆಯ ಕಡೆ ನೋಡಿದೆ. ಇದ್ದಕ್ಕಿದ್ದ ಹಾಗೆ, ಕನ್ನಡಿಯಲ್ಲಿ ಎರಡು ಕಣ್ಣುಗಳು ಕಾಣಿಸಿದವು, ಪಂಚಪ್ರಾಣಗಳೂ ಹಾರಿಹೋದಂತಾಯಿತು. ಇನ್ನೇನು ಕಿರುಚಬೇಕೆಂಬುವ ಹೊತ್ತಿಗೆ ಚಿಕ್ಕಮ್ಮ ನನ್ನ ಬಾಯನ್ನು ಬಿಗಿಯಾಗಿ ತನ್ನ ಕೈಯಿಂದ ಅಮುಕಿ ಹಿಡಿದುಕೊಂಡಳು ಸುಮ್ಮನಾದೆ. 'ಇಲ್ಲೇಇರು ಸದ್ದು ಮಾಡಬೇಡ' ಎಂದು ಹೇಳಿ, ಚಿಕ್ಕಮ್ಮನು ಮೆಲ್ಲನೆ ಎದ್ದು ಆಚೆಹೋದಳು.

ನನಗಾದರೋ ಎದೆಯು 'ಡವಡವ' ಎನ್ನುತ್ತಿತ್ತು. ಏನುಮಾಡೋದು! ಈಕಡೆ ಚಿಕ್ಕಮ್ಮ, ಆ ಕಡೆ ಪಿಶಾಚಿಯೋ ಏನೋ! ಪಂಚ ಪ್ರಾಣಗಳನ್ನು ಅಂಗೈಲಿ ಹಿಡಿದುಕೊಂಡಿದ್ದೆ. ಕನ್ನಡಿಕಡೆ ಓರೆಗಣ್ಣಿನಿಂದ ಒಂದಾವರ್ತಿ ನೋಡಿದೆ. ಅಲ್ಲೇನೂ ಇರಲಿಲ್ಲ. ಸದ್ಯ ಏನೂ-

ಹಿಂದೆ ಏನೋ ಭಾರವಾದ ಪದಾರ್ಥ ಬಿದ್ದಹಾಗಾಯಿತು. ಮೆಲ್ಲನೆ ಗುರುಗುಟ್ಟಿದ ಹಾಗಾಯಿತು. ಚಿಕ್ಕಪ್ಪನ ಕಡೆ ನೋಡಿದೆ; ಮಲಗಿ ನಿದ್ದೆಮಾಡುತ್ತಿದ್ದ.

'ರಾಮೂ, ಬಾರೋ ಇಲ್ಲಿ'

ಚಿಕ್ಕಮ್ಮನ ಧ್ವನಿ. ಅಲ್ಲಿಂದ ಹೊರಟೆ, ಬಾಗಿಲು ತೆಗೆದೆ, ಕೆಳಗೆ ಒಬ್ಬ ಬಿದ್ದಿದ್ದ; ಚಿಕ್ಕಮ್ಮನ ಕೈಲಿ ಒನಕೆ ಇತ್ತು. ಮೂಲೇಲಿ ಬಿದ್ದಿದ್ದ ಸೇದೋ ಹಗ್ಗ ತೋರಿಸಿ 'ತಗೋ ಕಟ್ಟೋಣ' ಎಂದಳು ಕೈಕಾಲು ಕಟ್ಟಿ ಅವನನ್ನು ಕೋಣೆಯೊಳಕ್ಕೆ ಎಳೆದುಕೊಂಡು ಬಂದು ಹಾಕಿದೆವು. ತಾತಯ್ಯನ್ನ ಎಬ್ಬಿಸಿಕೊಂಡು ಬಂದೆ.

ತಾತಯ್ಯ ಎಲ್ಲಾ ಕೇಳಿ 'ಕಣ್ಣು ಬಿಟ್ಟಿದ್ದಾನೋ?' ಎಂದ.

ನಾನು—ಇಲ್ಲ; ಕಟ್ಟಿಹಾಕಿದ್ದೇವೆ.

ತಾತ—ಕೊಡ ನೀರು ತಲೆಮೇಲೆ ಸುರೀರಿ ಬುದ್ಧಿ, ಕಣ್ಣು ಬಿಡ್ತಾನೆ.

ಹಾಗೆ ಮಾಡಿದೆ. ಕೆಳಗೆ ಬಿದ್ದಿದ್ದೋನು ಕಣ್ಣುಬಿಟ್ಟ.

ತಾತ—ಬಿಟ್ಟನೋ ?

ನಾನು—ಉ !

ಚಿಕ್ಕಮ್ಮ-ಚನ್ನಾಗಿ ಬರೆ ಎಳೆದು ಬುದ್ಧೀ ಕಲಿಸ್ತೇನೆ. ರಾಮು, ಆ ಸಲಾಕಿ ತಗೋ, ಒಲೆಗೆ ಉರಿ ಹಾಕಿ—

ತಾತ—ಬ್ಯಾಡ ತಾಯಿ. ನಾನೋಡ್ಕೋತೇನೆ.

ತಾತಯ್ಯ ಮೆಲ್ಲನೆ ಹತ್ತಿರಕ್ಕೆ ಹೋಗಿ 'ಲೇ! ನೀನೇನೋ ಬಂದಿದ್ದೋನು ಎನ್ನುತ್ತ ಹೊಟ್ಟೆಗೆ ಕೈ ಹಾಕಿ ಕಿವಿಚಿದ. ಅಬ್ಬಬ್ಬ! ಆ ಚೀತ್ಕಾರಧ್ವನಿ ಜನ್ಮೇಪಿ ಮರೆಯುವ ಹಾಗಿಲ್ಲ. ಅವನನ್ನು ಶೂಲಕ್ಕೆ ಹಾಕಿದ್ದಕ್ಕಿಂತ ಹೆಚ್ಚೇ ಚಿಕ್ಕಪ್ಪನಿಗೆ ಎಚ್ಚರವಾಯಿತು.

ಚಿಕ್ಕಪ್ಪ—ಏನದು ?

ತಾತ—'ಏನೂ ಇಲ್ಲ ಬುದ್ಧಿ, ಒಂದು ಕಪ್ಪೆ ಹೊಸಲುದಾಟಿ ಬಂದೈತೆ ಬುದ್ಧಿ—

ಚಿಕ್ಕಮ್ಮ—ಸುಮ್ಮನೆ ಮಲಗಿ; ನಾವೆಲ್ಲಾ ಮಾಡ್ತೀವಿ—

ಚಿಕ್ಕಪ್ಪ—ಏನು ಕಳ್ಳೀ ?

ತಾತ—ಪಾಪ, ಎಳೇಮಗು.

ಚಿಕ್ಕಪ್ಪ—ಅವನನ್ನೇನು ಮಾಡ್ತೀರಿ ?

ಚಿಕ್ಕಮ್ಮ—ನೈಕ್ಕೆ ಬರೆಹಾಕಿ—

ಕೆಳಗೆ ಬಿದ್ದಿದ್ದ ಕಳ್ಳ ಕಿಮುಕ್ ಕಮಕ್ ಎನ್ನಲಿಲ್ಲ. ಸುಮ್ಮನೇ ಮುದುಕನನ್ನು ನೋಡುತ್ತಿದ್ದ.

ತಾತ—ಅವೆಲ್ಲಾ ಬೇಕಿಲ್ಲ ಬುದ್ಧಿ, ನಾನೇಳ್ತೀನಿ. ಅವನ್ನ ಆಚೆ ದನದ ಕೊಟ್ಗೀಗೆ ಎಳಕೊಂಡು ಓಗಿ—

ತಾತಯ್ಯ ನಾನು ಇಬ್ಬರೂ ಅವನನ್ನು ಎಳೆಕೊಂಡು ಹೊರಟೆವು. ಚಿಕ್ಕಮ್ಮ ಲಾಂದ್ರ ತೆಗೆದುಕೊಂಡು ಬಂದಳು. ದನದ ಕೊಟ್ಟಿಗೆಯಲ್ಲಿ ಅವನನ್ನು ಉರುಳಿಸಿದೆವು. ತಾತಯ್ಯನು ಮೆಲ್ಲನೆ ಕೋಲನ್ನು ಆಡ್ಲಾಡಿಸಿ ಕೊಳ್ಳುತ್ತಾ ಹೋಗಿ ಒಂದು ಮೂಲೆಯಲ್ಲಿದ್ದ ಒಂದು ಸಣ್ಣ ಪೀಪಾ ಯನ್ನು ತೋರಿಸಿ—ಬುದ್ಧೀ, ಇದು ಸ್ವಲ್ಪ ಇತ್ತತ್ತ ಜರಿಗಿಸಿ, ಇದ ರೊಳಗೆ ಗುಂಡಿನ ಮದ್ದಿದೆ ಎಂದ.

ತಾತ—ಬುದ್ಧಿ, ಒಳಗೆ ಹೋಗಿ ಬತ್ತೀತರಲ?

ನಾನು—ಬೇಡ, ತಾತಯ್ಯ.

ಚಿಕ್ಕಮ್ಮ—ಸುಮ್ಮನೆ ತಗೊಂಬಾ ರಾಮೂ, ನಡಿ.

ನಾನು ಗೊಣಗುಟ್ಟುತ್ತಾ ಹೋಗಿ ತಂದೆ. ಅದನ್ನು ಸೀಪಾಯಿಯಲ್ಲಿಟ್ಟದ್ದೂ ಆಯಿತು; ಆ ಸೀಪಾಯಿ ಕಪ್ಪನಹತ್ತಿರ ಇಟ್ಟದ್ದೂ ಆಯಿತು. ನಾವೆಲ್ಲರೂ ಆಚೆಹೋದೆವು. ಬತ್ತಿ ದನದ ಕೊಟ್ಟಿಗೆಯಿಂದ ಒಂದು ಗಜ ಈಚೆವರಿವಿಗೂ ಬಂದಿತ್ತು. ಚಿಕ್ಕಮ್ಮ ಬತ್ತಿಗೆ ಬೆಂಕಿ ಹಚ್ಚು ಎಂದಳು. ಮೈಕೈಯೆಲ್ಲಾ ನಡುಗಲಾರಂಭಿಸಿತು. ಯತ್ನವಿಲ್ಲ. ಚಿಕ್ಕಮ್ಮನ ಕೈಗೆ ಸಿಕ್ಕುವುದಕ್ಕಿಂತ ಪಿಶಾಚಿ ಕೈಗೆ ಸಿಕ್ಕುವುದೇ ಮೇಲು. ಮೆಲ್ಲನೆ ಒಂದು ಕಡ್ಡಿ ಗೀಚಿದೆ. ಹಚ್ಚುವುದರೊಳಗಾಗಿ ಅದು ಹಾರಿಹೋಯಿತು. ಎರಡನೆಯ ಸಲ ಹಚ್ಚಿದೆ. ಬತ್ತಿ ಉರಿಯುತ್ತಾ ಬಂತು. ಇನ್ನೇನು ಈಗಲೋ ಆಗಲೋ 'ಢಂ' ಎನ್ನುತ್ತೆ ಎನ್ನುವ ಹೊತ್ತಿಗೆ ದನದ ಕೊಟ್ಟಿಗೆಯಿಂದ ಕಪ್ಪ ಈಚೆಗೆ ಹಾರಿ ಒಂದೇ ಉಸುರಿನಲ್ಲಿ ಓಡಿದ. ಇನ್ನೇನು ಮದ್ದು ಸಿಡಿಯುತ್ತೆಂದು ಕಾದಿದ್ದೆವು ಏನೂ ಇಲ್ಲ–ನಿಶ್ಶಬ್ದ. ಕಾದುಕಾದು ಸಾಕಾಗಿ ಒಳಗೆ ಹೋಗಿ ನೋಡಿದೆವು. ಸೀಪಾಯಿ ಪಕ್ಕದಲ್ಲಿ ತಾತಯ್ಯ ಕೂತಿದ್ದ, ಸೀಪಾಯಿ ಒಳಗೆ ನೋಡಿದೆವು ಏನೂ ಇರಲಿಲ್ಲ. ಚಿಕ್ಕಮ್ಮ ತಾತಯ್ಯನ್ನ ದುರದುರ ನೋಡಿದಳು. ತಾತಯ್ಯ ಮೆಲ್ಲನೆ 'ಆಯಿತು ತಾಯಿ, ಇನ್ನೇನ್ಬಂದಾನವ' ಎಂದ. ಚಿಕ್ಕಮ್ಮನು ಮಾತನಾಡದೆ, ಕಿವಿಮೇಲೆ ಬಿದ್ದರೂ ಕೇಳದಹಾಗೆ ಮುಂದಕ್ಕೆ ಹೆಜ್ಜೆಯಿಟ್ಟಳು. ನಾನೂ ಅವಳ ಹಿಂದೆ ಲಾಂದ್ರ ತೆಗೆದುಕೊಂಡು ಹೊರಟೆ, ತಾತಯ್ಯನೂ ಬಂದ.

ಮಾರನೆಯದಿನ ಬೆಳಗ್ಗೆ ನಾನು ತಾತಯ್ಯನನ್ನು ಕೇಳಿದೆ—

## 7

'ಯಾಕೆ ಹೀಗೆ ಮಾಡಿದೆ?''

'ಆ ಬಡ್ಡೀ ಹೈದ ನನ್ನ ಮೊಮ್ಮಗ ಬುದ್ಧಿ.

ಈಗಲೂ ನಮ್ಮ ಚಿಕ್ಕಪ್ಪ ಇದನ್ನು ಆಗಾಗ ನೆನಸಿಕೊಳ್ಳುತ್ತಾ ಇರುತ್ತಾರೆ.

---

# ಹುರಿಯೋ, ಮಾರಿಯೋ!

---

'ನಮ್ಮ ರಾಮಾಚಾರ್ರು ಗೊತ್ತಿಲ್ಲವೇ!'

'ಇಲ್ಲ—ಅವರಾರು?'

'ಓಹೋ ಸರಿ, ನೀನು ಹೊಸಬ.'

ನಮ್ಮ ಪೇಟೆಯಲ್ಲಿ ರಾಮಾಚಾರ್ರನ್ನ ನೋಡದೇ ಇದ್ದವರೇ ಇಲ್ಲ. ಅವರು ಹುಟ್ಟಿದೋರಿಗೆ ದೊಡ್ಡೋರು, ಬೆಳೆಯೋರಿಗೆ ಚಿಕ್ಕೋರು. ಅವರ ಗುಣಕಥನ ಮಾಡದೇ ಇದ್ದೋರೇ ಇಲ್ಲ. ರಾಮಾಚಾರ್ರೆಂದರೆ ಒಂದು ದೊಡ್ಡ ಚರಿತ್ರೆ ಬರೆಯೋಷ್ಟು ಸಮಾಚಾರ. ಎಲ್ಲರಿಗೂ ತಿಳಿದಂತೆಯೇ ಸರಿ. ಇವರ ಗುಣಗಳನ್ನು ವರ್ಣಿಸಲು ನಾಲ್ಕು ಬಾಯುಳ್ಳ ಆ ಬ್ರಹ್ಮನಿಂದಲೇ ಅಸಾಧ್ಯವೆಂದಲ್ಲಿ, ಮಾನವನಾದ ನನ್ನ ಕೈಲಾದೀತೆ! ಆದಾಗ್ಗೂ ಅವರ ವಿಚಾರವಾಗಿ ಒಂದೆರಡು ಮಾತುಗಳನ್ನು ಹೇಳಲು ಕುತೂಹಲ.

ಅವರಿಗೆ ನೆರೆಹೊರೆಯವರಲ್ಲಿ ಬಹಳ ನಂಬಿಕೆ! ಹಿತ್ತಲಲ್ಲಿ ಗೋಡೇ ಹಾಕಬೇಕೆಂದು ಇಟಕೆಗಳನ್ನು ತರಿಸಿ ಹಾಕಿಸಿದ್ದರು. ರಾತ್ರಿಯೆಲ್ಲಾ ಕೆಲಸಮಾಡಿ ಪ್ರತಿ ಒಂದು ಇಟಕೆಗೂ ಸುಣ್ಣದಿಂದ ನಾಮ ಹಚ್ಚುತ್ತ ಬಂದರು. ಏತಕ್ಕೆಂದರೆ, ತಮ್ಮ ಇಟಕೆಯನ್ನು ಯಾರಾದರೂ ಸಾಗಿಸಿದರೆ ಈ ನಾಮದ ಗುರ್ತಿನಿಂದ ಹಿಡಿಯಬಹುದೆಂದು— ಅಷ್ಟೆ !

ನೆರೆಹೊರೆಯುವರು ಕಳ್ಳರೆಂದಲ್ಲ, ಸುಮ್ಮನೆ ಬಿದ್ದಿರುವ ಇಟಕೆ
ಗಳನ್ನು ನೋಡಿದರೆ ಅವುಗಳನ್ನು ಉಪಯೋಗಿಸೋಣವೆಂದು ಒಂದು
ವೇಳೆ ತೆಗೆದುಕೊಂಡರೆ ಈ ಇಟಕೆ ನಮ್ಮದೇ? ಎಂದು ಹೇಳುವುದಕ್ಕೆ
ಒಂದು ಗುರ್ತಿರಬೇಕಲ್ಲ ಅದಕ್ಕೆ !

ಇಷ್ಟು ನಂಬಿಕೆ ಹುಟ್ಟುವುದಕ್ಕೆ ಕಾರಣಗಳು ಬಹಳವಾಗಿರ
ಬಹುದು. ಆದರೆ ನನಗೇನೋ—ಅವರು ಮೂರನೇ ಮದುವೆಮಾಡಿ
ಕೊಂಡಿದ್ದೇ ಕಾರಣವೆಂದು ತೋರುತ್ತೆ. ಮೊದಲನೆಯ ಹೆಂಡತಿಯ
ಹೆಸರು ಸೀತಮ್ಮ; ಆಕೆ ಏನೂ ತಿಳಿದವಳಲ್ಲ; ಯಾರಾದರೂ ಮನೆಗೆ
ಬಂದರೆ 'ಬನ್ನಿ; ನಿಮ್ಮನೇಲಿ ಏನಡಿಗೆ? ನಮ್ಮ ಯಜಮಾನರಿಗೆ ನೂರು
ರೂಪಾಯಿ ಸಂಬಳ; "ರೆಸಿಡೆಂಟಾಫೀಸಿನಲ್ಲಿ!' ಎನ್ನುತ್ತಿದ್ದಳು.
ಒಂದು ಮಗುವನ್ನು ಹೆತ್ತು ಸತ್ತಳು. ಎರಡನೆಯ ಹೆಂಡತಿ ಬರುವ
ಹೊತ್ತಿಗೆ ಈ ಮಗುವು ಹುಡುಗನಾಗಿದ್ದ. ಇನ್ನು ಅವನಿಗಾದ ಗತಿ
ಕೇಳಬೇಕೇ ?

ಎರಡನೆಯ ಹೆಂಡತಿಯನ್ನು ರೂಪಿಗಾಗಿ ಮದುವೆಮಾಡಿಕೊಳ್ಳ
ಲಿಲ್ಲ. ಹೆಸರು ಸುಂದರಮ್ಮ. ಸುಂದರವಾಗಿಲ್ಲದಿದ್ದುದರಿಂದ ಆ ಹೆಸ
ರನ್ನಿಟ್ಟರೋ ಏನೋ! ಮುಖದಲ್ಲಿ ರಾಮಾಯಣವೆಲ್ಲಾ ಬರೆದಿತ್ತು.
ಇವಳೂ ಬಂದೋಳು ಹಾಗೇ ಹೋಗಲಿಲ್ಲ; ಒಂದು ಹೆಣ್ಣು ಹೆತ್ತು
ಸತ್ತಳು.

ಮೂರನೆಯ ಹೆಂಡತಿ ಇವರಿಬ್ಬರಿಗಿಂತಲೂ ವಾಸಿ, ರೂಪವಿ
ದ್ದರೂ ಚಿಂತೆ, ರೂಪವಿಲ್ಲದಿದ್ದರೂ ಚಿಂತೆ, ಎಂಬಂತಾಗಿ ಕೈಲಾದಷ್ಟು
ಬೇಗ ಪೆನ್ಷನ್ ತೆಗೆದುಕೊಂಡು ಮನೆಯಲ್ಲಿರಬೇಕೆಂದು, ರಾಮಾ
ಚಾರ್ರು ಮೂರುವರ್ಷ ಮಟ್ಟಿಗೆ ಎಕ್ಸ್‌ಟೆನ್ಷನ್ (Extension)

ತೆಗೆದುಕೊಂಡು ಮನೆಯಲ್ಲಿ ನಿಂತರು. ಇವರಲ್ಲಿ ಒಂದು ವಿಶೇಷವಾದ ಸಂಗತಿ: ಮನೆಬಿಟ್ರೆ ಕಛೇರಿ; ಕಛೇರಿಬಿಟ್ರೆ ಮನೆ. ರಾಮಾಚಾರ್ರನ್ನ ಬೀಗಿಜುಲ್ಲಿ ಕಂಡರೆ 'ಇಷ್ಟೇ ಹೊತ್ತಾಗಿದೆ'' ಎಂದೆಲ್ಲರೂ ಹೇಳೋ ಹಾಗಿತ್ತು.

ಮನುಷ್ಯ, ಖರ್ಚು ಮಾಡುವುದರಲ್ಲಿ ಬಹಳ ಗಟ್ಟಿಗ, ಯಾರಾದರೂ ನೆಂಟರು ಮನೆಗೆ ಬಂದರೆ 'ನನಗೆ ಹೊಟ್ಟೇನೋವು, ಮೈ ಕೈ ಸರಿಯಾಗಿಲ್ಲ. ಈ ದಿನ ನಾನು ಊಟಮಾಡುವುದಿಲ್ಲ' ಎಂದು ಹೇಳಿ ಬರೀಹೊಟ್ಟೆಯಲ್ಲಿಯೇ ಆತನು ಕಛೇರಿಗೆ ಹೋಗುತ್ತಿದ್ದ. ಬುದ್ಧಿ ಬೇಕಾದಹಾಗಿತ್ತು. ಮನೆ ಬಿಟ್ಕೊಡನೆಯೇ ಗಾಡಿಯಲ್ಲಿ ಕುಳಿತು ದೊಡ್ಡ ಪೇಟೆ ಚೌಕದವರಿಗೂ ಸುಮ್ಮನೆ ಬರೋದು ಆ ಮೇಲೆ,

''ಏನೋ, ಎಷ್ಟು ಬಾಡಿಗೆ ?''

''ಎಂಟಾಣೆ ಮಾಮೂಲು ಸ್ವಾಮಿ.'

''ಆಯಿತಾಯಿತು. ಸಾಕಪ್ಪ ಇಲ್ಲೇ ಬಿಟ್ಟುಬಿಡು ಮೂರಾಣೆ; ಬರುತ್ತೀಯೋ ಇಲ್ಲವೋ?''

''ಇಲ್ಲಬುದ್ಧಿ—ಇಲ್ಲೇ ಇಳೀರಿ.''

''ಇಗೊ (ಇಳಿದು)—'ತಗೋ' ಒಂದಾಣೆಯನ್ನು ಕೊಡುವುದಕ್ಕೆ ಹೋಗುತ್ತಿದ್ದನು.

''ಏನ್ರೀ, ಒಂದಾಣೆ, ನೀವೇ ಇಟ್ಕೊಳ್ಳಿ...ಕಾಫಿ......''

''ತಗೊಂಬೋ ಹಾಗಿದ್ರೆ ತಗೋ—ಇಲ್ಲದಿದ್ದರೆ ಬಿಡು.'

''ಬೇಡಿ, ಬಿಡಿ ಸ್ವಾಮಿ—ಕೊಡೋದೇವರು ಹ್ಯಾಗಿದ್ದರೂ ಕೊಡ್ತಾನೆ. ನಿಮ್ಮಂಥಾವರ್ನ ಗಾಡೀಲಿ ಕುಂಡ್ರಿಸಿದ್ದೇ ತಪ್ಪು.'

ಆ ಒಂದಾಣೆಯೂ ಮಿಕ್ಕಿತು! ಒಂದೂವರೆ ಎರಡಾಣೆಯೊಳಗಾಗಿ ಮತ್ತೊಂದು ಗಾಡಿಯಲ್ಲಿ ಕುಳಿತು ಕಛೇರಿಯನ್ನು ಸೇರುವುದು.

ಮನೆಗೆ ಸಾಮಾನು ತರುವಾಗಲೂ ಹೀಗೆಯೇ. ಮೊಸರಿನವರನ್ನು ಕೂಗಿ ದೊಡ್ಡ ಪಂಚಪಾತ್ರೆಯಲ್ಲಿ ಮೂರುನಾಲ್ಕು ಸೇರು ಮೊಸರನ್ನು ಅಳೆಸುವುದು; ಸೇರಿಗೆ ಆರುಕಾಸಿನಂತೆ ಕೊಡುವುದು! ಮುಂದಾಗುವುದು ಗೊತ್ತೇ ಇದೆ; ನಿನ್ನ ಮೊಸರು ನೀನು ತೆಗೆದುಕೊಂಡು ಹೋಗೆನ್ನುವುದು! ಎಷ್ಟುಬಗ್ಗಿಸಿದರೂ ಅಷ್ಟು ಅಂಟಿಕೊಳ್ಳದಿರುವುದೇ ಹೀಗೆ ನಾಲ್ಕು ಸಲ ನಾಲ್ಕು ಪಾತ್ರೆಗಳಲ್ಲಿ ಮಾಡುವುದು. ಸ್ವಲ್ಪ ನೀರನ್ನು ಹಾಕಿ ಎಲ್ಲವನ್ನೂ ಒಟ್ಟುಗೂಡಿಸಿದರೆ, ಒಂದೆರಡು ದಿನಕ್ಕೆ ಮಜ್ಜಿಗೆಯಾಯಿತು.

ನಗದು ವ್ಯಾಪಾರವೆಂಬುದೇ ಇಲ್ಲ. 'ನಾವೇನು ಸ್ಥಳವಂದಿಗರಲ್ಲವೆ? ನಮ್ಮಲ್ಲಿ ನಂಬಿಕೆಯಿದೆ ಎಂತ ನಮಗೆ ಸಾಲಾಕೊಡ್ತಾರೆ.'' ಸಂಬಳ ತೆಗೆದುಕೊಂಡರೆ ಅದರಲ್ಲಿ ಮುಕ್ಕಾಲುಪಾಲು ಬ್ಯಾಂಕಿಗೆ ಹೋಗಬೇಕು. ಮಿಕ್ಕಿದ್ದರಲ್ಲೇ ಎಲ್ಲಾ ನಡಿಯಬೇಕು. ಸಾಲದ ಅಂಗಡಿಯೋರು ಬಂದರೆ 'ಏನುಮಾಡಲಯ್ಯ, ನಿನಗಾಗಿ ತೆಗೆದಿಟ್ಟಿದ್ದೆ; ನಿನ್ನೆ ರಾತ್ರಿ, ಮನೆಗೆ ಅಡ್ಡಿಕೆ ಬೇಕಾಗಿತ್ತು. ಬಹಳ ಖರ್ಚಯ್ಯ, ಈ ತಿಂಗಳಲ್ಲಿ: ಸ್ವಲ್ಪ ಸುಧಾರಿಸಿಕೋ; ಇವತ್ತಲ್ಲ, ನಾಳೆಕೊಡ್ತೇನೆ.'

''ಏನುಸ್ವಾಮಿ, ಹೆಂಡತೀಗೆ ಒಡವೆ ಮಾಡ್ಸಿದರೆ ನಾವು ಕಾಯಬೇಕೇನು?'

"ಛೀ, ಛೀ, ಹುಚ್ಚಪ್ಪ. ಅವಳೆಲ್ಲಾದರೂ ಕೇಳಿಯಾಳೋ—ನೀನಿನ್ನೂ ಮಗು ಹೆಂಡತಿ ವಿಚಾರ ನಿನಗೇನು ಗೊತ್ತು! ನಿಮ್ಮ ದಣೀಗೆ ಹೇಳು, ಅಂಗಡೀಗೆ ಬರುತ್ತೇನೆ. ಹೇಳ್ತೇನೆ—ಇಗೋ ಒಂದು, ಎರಡು, ಮೂರು, ನಾಲ್ಕು ಐದು-ಉ-ಇದನ್ನು ಕೊಡು."

ಪಕ್ಕದ ಮನೆ ಶ್ರೀಕಂಠ—ಕಂಠೀಗೂ, ರಾಮಾಚಾರ್ರಿಗೂ ಬಹಳ ಸ್ನೇಹ. ನಾವೆಲ್ಲರೂ ಕಂಠೀನ—'ಎಲ್ಲೋ ಕಂಠೀ, ರಾಮಾಚಾರ್ರ ಅಂಗೀ ವಿಚಾರ ಹೇಳೋ ಎಂಬೋದು! ಅವನಿಗೂ ಅದರ ವಿಚಾರ ಹೇಳಬೇಕೆಂದರೆ ಬಹಳ ಕುತೂಹಲ!

'ರಾಮಾಚಾರ್ರು ಅಂಗಿಯನ್ನು ಧೊರೆಗಳು ಕೇಳಿದರಂತೆ.'

'ಯಾಕೊ?'

'ಅದು ಬೆಂಕಿಯಲ್ಲಿ ಹಾಕಿದರೆ ಸುಡೋದಿಲ್ಲ; ನೀರಿನಲ್ಲಿ ಹಾಕಿದರೆ ನೆನೆಯೋದಿಲ್ಲ!'

'ಭಲಾಪ್ಪ!'

'ಒಗೆದರೆ ಬಟ್ಟೆ ಬೇಗ ಹೋಗುತ್ತೆಂದು ಆಚಾರ್ರು ನೀರಿನಲ್ಲಿ ಬಟ್ಟೆ ಹಾಕೋದೇ ಇಲ್ಲ. ಆ ಪಂಚೆ ಆಚಾರ್ರಿಗೆ ಮೊದಲನೇ ಮಾವ ಮದುವೆಯಲ್ಲಿ ಕೊಟ್ಟದ್ದು. ಒಳ್ಳೆ ಮಗುಟದ ಬಣ್ಣ ಬಂದಿದೆ. ಪಂಚೆಯನ್ನು ಮಗುಟ ಮಾಡಬೇಕಾದರೆ ಈ ಕೆಳಗಿನ ವಿಳಾಸಕ್ಕೆ ಬರೆಯಿರಿ. ರಾಮಾಚಾರ್ರು ಕರಗ—'

ಕಂಠೀ ಆಚಾರ್ರಿಗೆ 'ಕರಗ ಎಂದು ಕರೆಯುವುದಕ್ಕೆ ಕಾರಣವೇನೆಂದರೆ ಕಚೇರಿಯಿಂದ ಆಚಾರ್ರು ಬರುವಾಗ ದಡದಡನೆ ಓಡುತ್ತಾ

ಬರುತ್ತಿದ್ದರು. ಹೆಂಡತಿ ಮುಖವನ್ನು ನೋಡಿದ ಹೊರತು ಆಚಾರ್ರಿಗೆ ನೆಮ್ಮದಿಯಿಲ್ಲ. ಒಳ್ಳೇ ಕರಗ ಬಂದಹಾಗೆ ಬರುತ್ತಾರೆ 'ಎಂದು ಕಂಠಿ ಆಗಾಗ ಹೇಳುತ್ತಿದ್ದ. ಇದರಿಂದ ಆಚಾರ್ರಿಗೂ ಕಂಠಿಯನ್ನು ಕಂಡರೆ ಸ್ವಲ್ಪ ರೇಗುತ್ತಿತ್ತು.

ಮಂಗಳವಾರ ಒಳ್ಳೇ ರಾಹುಕಾಲದಲ್ಲಿ ಆಚಾರ್ರು ಕಛೇರಿಯನ್ನು ಬಿಟ್ಟರು! ದಡದಡನೆ ಮನೆಯ ಕಡೆ ಬರುತ್ತಿದ್ದರು' ದಾರಿಯಲ್ಲಿ ಒಂದು ಹುರಿ ಬಿದ್ದಿತ್ತು. ತಕ್ಷಣವೇ ಮನೆಯಲ್ಲಿದ್ದ ಪಂಚಾಂಗವು ನೆನಪಿಗೆ ಬಂದಿತು. ಈ ಹುರಿ ಆ ಪಂಚಾಂಗಕ್ಕೆ ಹಾಕಿ ಗೋಡೆಗೆ ತಗಲುಹಾಕಲು ಬಹಳ ಉಪಯೋಗವೆಂದು ತೋರಿತು. ತಕ್ಷಣವೆ ಬೊಗ್ಗಿ ಕೈ ಹಾಕಿ ತೆಗೆದುಕೊಂಡರು. ಗ್ರಹಚಾರ ಎದುರಿಗೆ ಕಂಠೀ ನೋಡುತ್ತಿರಬೇಕೇ? ಏನೋ ಬಂತೆಂದು ಕೊಂಡು ತಮ್ಮಲ್ಲಿದ್ದು ದೇನೋ ಕಳೆದುಕೊಂಡಂತೆ ಅಲ್ಲಿ ಇಲ್ಲಿ ಸ್ವಲ್ಪ ಹೊತ್ತು ಹುಡುಕಲಾ ರಂಭಿಸಿದರು. ಇನ್ನೇನು ಮುಂದಕ್ಕೆ ಹೋಗೋಣ ಎಂಬುವ ಹೊತ್ತಿಗೆ—'ಅವರೇ ಅವರೇ ತೆಗೆದು ಕೊಂಡರು' ಎಂದು ಅವರಿಗೆ ಕೇಳಿಸಿತು. ಆಚಾರ್ರು ತಲೆಯೆತ್ತಿ ನೋಡಿದರು. ಎರಡು ಗಜಗಳ ದೂರದಲ್ಲಿ ಒಬ್ಬ ಪೋಲೀಸಿನವನೂ, ಆತನ ಜೊತೆಯಲ್ಲಿ ಮತ್ತೊಬ್ಬನೂ, ಕಂಠಿಯೂ ನಿಂತಿದ್ದರು. ಆಚಾರ್ರು ಮುಂದಕ್ಕೆ ಹೊರಟರು.

ಪೋ—'ಸ್ವಾಮಿ, ಕೊಡಿ.'

ರಾ—'ಏನಯ್ಯಾ, ನಾನೇನೂ ತೆಗೆದುಕೊಂಡಿಲ್ಲ.'

ಕಂಠಿ—'ನಾನು ನೋಡಿದೆ; ಇವನೇ ತೆಗೆದುಕೊಂಡಿದ್ದು.'

ಮುತ್ತೊಬ್ಬ—'ಸ್ವಾಮಿ, ಆದರಲ್ಲಿ ಐವತ್ತು ರೂಪಾಯಿ—ಐದು ಐದು ರೂಪಾಯಿನ ನೋಟುಗಳು ಸ್ವಾಮಿ—ಕೊಟ್ಬಿಬಿಡಿ ಸ್ವಾಮಿ; ನಾನು ಬಡವ.'

ರಾ—'ಅಯ್ಯೋ ದೇವರೇ, ನಾನು ನೋಡಲಿಲ್ಲಪ್ಪ; ನಾನು ಈ ಹುರಿಯನ್ನು ತೆಗೆದುಕೊಂಡೆ—ಅಷ್ಟೆ.'

ಕಂಠಿ—'ಅಲ್ಲ; ಅಲ್ಲ; ಎಲ್ಲಾ ಸುಳ್ಳೇ. ಇವನೇ ತೆಗೆದುಕೊಂಡ.'

ಪೋ—'ನಡೀರಿ ಸ್ವಾಮಿ, ಸ್ಟೇಷನ್ನಿಗೆ ಬನ್ನಿ.'

ದಾರಿಯಲ್ಲಿ ಎಲ್ಲರೂ ಕೇಳುವುದಕ್ಕೆ ಮೊದಲು ಮಾಡಿದರು. ಕಂಠಿಯಾದರೋ—'ಕರಗ ಪೋಲೀಸಿಗೆ ಹೋಗುತ್ತಿದ್ದಾನೊ' ಎಂದು ಕೂಗುತ್ತಾ ಹಿಂದೆಯೇ ಇದ್ದನು. ಹುಡುಗರಾದರೋ 'ಕಂಠೀ-ಕರಗ ಕರ್ಗ-ಕರ್ಗ-ಕರ್ಗ' ಎಂದು ಕೂಗುತ್ತಾ ಸ್ಟೇಷನವರಿವಿಗೂ ಹಿಂಬಾಲಿಸಿದರು.

ಪೋಲೀಸಿನವನು ಆಚಾರ್‍ರನ್ನು ಕರೆದುಕೊಂಡು ಹೋಗಿ ದಫೇದಾರನ ಮುಂದೆ ಬಿಟ್ಟನು. ದಫೇದಾರನು ಕುರ್ಜಿಯನ್ನು ಬಿಟ್ಟೇಳದೆ 'ಏನ್ರಿ' ಎಂದನು. ಆವನಿಗಾದರೊ ಆಚಾರ್‍ರು ಒಂದು ಸಲವಾದರೂ ದಸರ ಇನಾಮುನ್ನು ಕೊಡಲಿಲ್ಲವೆಂದು ಕೋಪ-ಇದೇ ತಕ್ಕ ಸಮಯ!

ಪೋ—'ಸ್ವಾಮಿಾ, ಇವರೇ ತಗೊಂಡರೆಂದು ಈ ಹುಡುಗ ಹೇಳ್ತಾನೆ'

ದಪೇ—'ಏನ್ತಗೊಂಡಿದ್ದು? ಏನ್ರಿ?

ಮತ್ತೊಬ್ಬ—'ಸ್ವಾಮಿ, ನಾನು ಬಡವ. ದಾರೀಲಿ ಬರ್ತ ನನ್ನ ಪಾಕೆಟ್ ಕೆಳಗೆ ಬಿತ್ತು ಅದರಲ್ಲಿ ಐವತ್ತು ರೂಪಾಯಿತ್ತು; ಎಲ್ಲಾ ಐದೈದು ರೂಪಾಯಿ ನೋಟುಗಳು ಸ್ವಾಮಿ'

ಕಂಠಿ—'ಸಾ ನೋಡಿದೆ ಇವರೇ ತಗೊಂಡರು. ಅಲ್ಲೇ ಓಡಾಡುತ್ತಾ ಇದ್ದರು'

ಪೋ—'ಹೌದು, ಇವರೇನೋ ಅಲ್ಲೇ ಹುಡುಕಾಡುತ್ತ ಇದ್ದ ಹಾಗಿತ್ತು.'

ರಾ—'ನಾನು ತೆಗೆದುಕೊಂಡಿಲ್ಲ.

ದಫೇ—'ಮತ್ತೇತಕ್ಕಾಗಿ ಅಲ್ಲಿ ಹುಡುಕುತ್ತಿದ್ದಿರಿ?'

ರಾ—,ಈ ಹುರಿ ಬಿದ್ದಿತು. ನನಗನುಕೂಲ, ಅಂತ ಅದನ್ನು ತೆಗೆದುಕೊಂಡೆ.'

ಕಂಠಿ—'ಆಮೇಲೂ ಅಲ್ಲೇ ಹುಡುಕುತ್ತಾ ಇದ್ದರು, ಕೇಳಿ.'

ದಫೇ—ಹೌದೇನ್ರೀ?'

ರಾ—'ಏನೂ ತಿಳಿಯದು, ಈ ಹುರಿ ಮಾತ್ರ ತಗೊಂಡೆ.'

ಮತ್ತೊಬ್ಬ—'ದೇವ್ರು ಏನಾದರೂಮಾಡಿ ಕೊಡಿಸಬೇಕು. ನಾನು ಬಡವ'

ದಫೇ—'ಏನ್ರೀ, ನಿಜ ಹೇಳಿ.'

ರಾ—'ಸುಳ್ಳು ಹೇಳ್ತೇನೇನು?'

ದಫೇ—'ದುಡ್ಡೆಂವರೆ ನೀವೇನು ಬೇಕಾದರೂ ಮಾಡ್ತೀರಿ. ತಗೊಂಡಿದ್ದರೆ ಕೊಟ್ಟುಬಿಡಿ. ಚನ್ನಾಗಿಲ್ಲ-ನೀವು ದೊಡ್ಡೋರು. ನೀವೇ ಹೀಗೆ ಮಾಡಿದರೆ ಹೇಗೆ?'

ರಾ—'ಇಲ್ಲವಯ್ಯ, ನಾನು ತೆಗೆದುಕೊಂಡಿಲ್ಲ.'

ದಫೇ—'ನನಗೇನು ಸ್ವಾಮಿ—ನಾನಂತೂ ಈ ಕೇಸು ತಗೋ ತೇನೆ. ನಿಮ್ಮಿಷ್ಟ ನೋಡಿ.'

ಇಷ್ಟರಲ್ಲಿಯೇ ಒಬ್ಬ ಹುಡುಗನು ಸ್ಟೇಷನ್ ಒಳಕ್ಕೆ ಓಡಿಬಂದು 'ಇಲ್ಲಿ ನೋಡಿ, ಇದಲ್ಲಿ ಶಿಕ್ಕಿತು' ಎಂದನು. ದಫೇದಾರನು ತಿರುಗಿ ನೋಡಲು ಹುಡುಗನ ಕೈಯಲ್ಲಿ ಪಾಕೆಟ್ಟಿತ್ತು. ಕಂಠಿಯು 'ಎಲ್ಲಿತ್ತೋ ಶ್ರೀಪಾದೂ?' ಎಂದನು. ಶ್ರೀಪಾದೂ 'ಅಲ್ಲಿ ಅಂಗಡಿ ಸಾಲಿನಲ್ಲಿ! ಎಂದುತ್ತರಕೊಟ್ಟನು. ದಫೇದಾರನು ಪಾಕೆಟ್ಟನ್ನು ಕೈಗೆ ತೆಗೆದು ಕೊಂಡು 'ಇದೇನಯ್ಯ ನಿಂದು!' ಎಂದು ಕೇಳಿದನು. ಮತ್ತೊಬ್ಬನು ಅದನ್ನು ನೋಡಿ 'ನಂದಿದ್ದಹಾಗೇ ಇದೆ' ಎಂದನು. ಬಿಚ್ಚಿ ನೋಡಿ ದರು. ಐದೈದು ರೂಪಾಯಿನ ನೋಟುಗಳು ಒಟ್ಟು ಐವತ್ತು ರೂಪಾ ಯಿಗಳಿದ್ದವು.

ದಫೇ—'ಸರಿ, ಸ್ವಾಮಿ, ಹೋಗಬಹುದು. ಲೋ ಹುಡುಗ ನಿನಗೆ ಮಾಡ್ತೀನಿ ತಾಳು ಸುಳ್ಳು ಹೇಳ್ತೀಯಾ?'

ಕಂಠೀ—'ಇಲ್ರೀ-ನಾನು ನೋಡಿದೆನ್ರೀ-ನಿಮ್ಮ ಪೋಲೀಸಿನವ ನನ್ನು ನೋಡಿದ ತಕ್ಷಣವೇ ಬಿಸಾಕಿರಬಹುದುರೀ—'

ರಾಮಾಚಾರ್ರು, ಒಳ್ಳೆಯವರ ಮುಖ ನೋಡಿ ಎದ್ದಿರಬೇಕೆಂದು ಕೊಳ್ಳುತ್ತಾ ಮನೆಯನ್ನು ಸೇರಿದರು. ಕಂಠಿಯಾದರೋ 'ಕರಗನ್ನ ಜೈಲಿನಲ್ಲಿ ಹಾಕಿದ್ದರು.' ಎಂದು ಕೂಗುತ್ತಾ ಬೀದಿಬೀದಿ ತಿರುಗಲಾ ರಂಭಿಸಿದನು.

# ಗೊಣಗುಟ್ಟೋ ಗೋವಿಂದ.

---

ಗೋವಿಂದರಾಯನನ್ನ ನೀವು ನೋಡಿದ್ದರೇನು ? ಅಯ್ಯೋ ಪಾಪ, ನೋಡೋದೆಲ್ಲಿ! ಈಗ್ಗೆ ಐನೂರು ವರ್ಷದ ಮುಂಚೆ ಅವನು ಹಂಪೆಯಲ್ಲಿದ್ದ. ಹಂಪೆ ಕಾಣಿರ! ನೋಡೋಸ್ಥಳ. ಆದರೆ ಅಲ್ಲಿಗೆ ಹೋಗಿನೋಡಿಕೊಂಡು ಬಂದೋರು —'ಹಂಪೆಗೆ ಹೋಗೋಕಿಂತ ಕೊಂಪೇಲಿರೋದು ಮೇಲು' ಅಂತಾರೆ.

ಕೃಷ್ಣರಾಯನ ಕಾಲದಲ್ಲಿ ಅದು ವಿಜಯನಗರದ ರಾಜಧಾನಿ. ಆಗ ಅಲ್ಲಿಲ್ಲಿ ನೋಡಿದರೂ ಸಡಗರ. ಅದೇನು ಮಹಾ ಮನೆಗಳು ! ಅದೇನು ಜನ! ಅದೇನು ಓಡಾಟ! ಎಲ್ಲೆಲ್ಲೀ ಪಂಡಿತರೂ, ನರ್ತಕರೂ ಎಲ್ಲಾ ಅಲ್ಲೇ.

ಅಲ್ಲಿ ಸಿಕ್ಕುತ್ತಿದ್ದಂಥಾ ರೋಜಾ ಹೂ ಇನ್ನೆಲ್ಲೂ ಇರಲಿಲ್ಲ. ಎಷ್ಟು ಬಡವನಾಗಿದ್ದರೂ, ಮನೆಗೆ ಹೋಗುತ್ತಾ ಒಂದು ರೋಜಾ ಹೂವಾದರೂ ತೆಗೆದುಕೊಂಡು ಹೋಗದೆ ಇರುತ್ತಿರಲಿಲ್ಲವಂತೆ. ನಮ್ಮ ಗೋವಿಂದರಾಯನಿಗೂ ರೋಜಾ ಹೂ ಕಂಡರೆ ಪ್ರಾಣ.

ವಜ್ರ, ವೈಢೂರ್ಯ, ಪುಷ್ಯರಾಗ ಇವೆಲ್ಲಾ ಮಾರೋ ಅಂಗಡಿಗಳ ಅವುಗಳ ಮೇಲೆ ಶೋಭಿಸುತ್ತಿದ್ದ ಮಹಡಿಗಳು, ಆ ಅಲಂಕಾರ, ಎದುರಿನಲ್ಲೇ ಅರಮನೆ ಕೈಸಾಲೆ, ಧೊರೆಯೋ ಸಾಯನ ಮಂತ್ರಿಯೋ ಯಾರಾದರೂ ಬೀದಿಬೀದಿಯಲ್ಲಿ ಹೋಗೋವಾಗ ಆ ಜನರ ಸಂತೋಷ ಇವೆಲ್ಲಾ ನೋಡೋದಕ್ಕೆ ಎಷ್ಟು ಕಣ್ಣಿದ್ದರೂ ಸಾಲದು.

ಹುಕ್ಕರಾಯ ಥೊರೆ, ಸಾಯನ ಮಂತ್ರಿ, ಇದಕ್ಕಿಂತಲೂ ಇನ್ನೂ ಬೇಕೆ! ಆದರೂ ಗೋವಿಂದರಾಯರಿಗೆ ಎಷ್ಟೋ ವಿಚಾರಗಳಲ್ಲಿ ಅಸಮ್ಮತ.

ಎಷ್ಟಾದರೂ ಜನರ ಮನಸ್ಸಿನಲ್ಲಿರೋದು ರಾಜನಿಗೆ ತಿಳಿಯೋದು ಕಷ್ಟ. ಎದುರಿಗೆ ಕರೆಸಿ ಕೇಳಿದರೆ ಇರೋ ಸಂಗತಿ ಹೇಳೋದಿಲ್ಲ. ಹೆದರಿಕೆ. ಬೇರೆಯೋರಿಗೆ ಆ ಕೆಲಸ ಕೊಟ್ಟರೂ ಸಾಗೋದು ಕಷ್ಟ. ಆದಕ್ಕಾಗಿ ತಾನೇ ತಿಳಿದುಕೊಳ್ಳುವುದೊಳ್ಳೆಯದೆಂದು ಹುಕ್ಕರಾಯ ಆಗಾಗ ವೇಷವನ್ನು ಹಾಕಿಕೊಂಡು ಹೋಗೋ ಪದ್ಧತಿ.

ನಮ್ಮ ಗೋವಿಂದರಾಯರದು ಗೊಣಗುಟ್ಟೋದು ವಿಪರೀತ. ಯಾನ ಕೆಲಸ ಮಾಡಲಿ, ಎಲ್ಲಿಗೆ ಹೋಗಲಿ ಯಾರನ್ನ ನೋಡಲಿ, ಗೊಣಗುಟ್ಟುತಿರೋದೇ ಅಷ್ಟೇ ಅಲ್ಲ. ನಡುದಾರೀಲಿ ಇದ್ದಕ್ಕಿದ್ದ ಹಾಗೆ ಅವರನ್ನು ಇವರನ್ನು ಎಲ್ಲಾರನ್ನೂ ಕರೆಯೋದು, ಅವರೆದುರಿಗೆ ಸುಮ್ಮನೆ ಗೊಣಗುಟ್ಟೋದು ಏನೂ ಸಿಗದಿದ್ದರೆ— 'ಅಲ್ಲಿ ನೋಡಿ ! ಆಕಾಶವೆಲ್ಲಾ ಹೀಗೆ ನೀಲಿಯಾಗಿಬಿಟ್ಟರೆ ಬದುಕೋ ಬಗೆ ಹೇಗೆ ? ಎಂಬೋದು. ಹೀಗೆ ಗೊಣಗುಟ್ಟುತ್ತಾ ಇರುವಾಗ ಒಂದು ದಿನ ಸಾಯನ ಮಂತ್ರಿ ಜೋಡೀ ಕುದುರೆ ಸಾರೋಟಿನಲ್ಲಿ ಆ ಬೀದಿಯಲ್ಲಿ ಹೊರಟ. ಇದು ನಮ್ಮ ಗೋವಿಂದರಾಯರ ಕಣ್ಣಿಗೆ ಬಿತ್ತು. ಇವರಿಗೆಲ್ಲಾ ಹೀಗೆ ದುಡ್ಡು ಸುರಿದರೆ ದೇಶ ಉದ್ಧಾರ ಆಗೋದು ತಾನೆ ಹೇಗೆ! ಹೇಳೋರಿಲ್ಲ, ಕೇಳೋರಿಲ್ಲ. ಗೋಪಾಲಪ್ಪನ ಮದುವೆ ! ಥೊರೆಗಂತೂ ಯಾರಾದರೂ ಬಂದು ಬಾಯಿ ಬಡಿಯೋ ಹಾಗೆ ಮಾತನಾಡಿದರೆ ಸಾಕು. ಅವರ ಸಮಾನವೇ ಇಲ್ಲ. ಅವರಿಗೇನು ಬೇಕಾದರೂ ಕೊಟ್ಟುಬಿಡೋದೇ ! ಹೀಗೆ ಗಾಡೀಲಿ ಕೂತು ಸುಖವಾಗಿ ತಿರುಗೋ ಕೆಲಸ ನಾ ಮಾಡಬಾರದೆ! ನಿರ್ವಾಕವಿಲ್ಲದ ಮಂತ್ರಿ ಕೆಲಸ?'

ಮಾರನೆಯ ದಿನ ಬೆಳಗ್ಗೆ, ಅರಮನೆಯಿಂದ ಗೋವಿಂದರಾಯ ರಿಗೆ ಔತನ ಬಂತು. ರಾಯರಿಗೆ ಪರಮಾನಂದ 'ನಮ್ಮೆಜ ಮಾನ್ರು ಅರಮನೆಗೆ ಹೋಗಿದ್ದಾರೆ ಏನೋಪ್ಪ! ಧೊರೆಗಳು ಹೇಳಿ ಕಳಿಸಿದ್ದರು.' ಎಂದು ರಾಯರ ಪತ್ನಿ ಊರೆಲ್ಲಾ ಸಾರಿಬಿಟ್ಟು ಬಂ ದಳು.

ಗೋವಿಂದರಾಯರು ಅರಮನೆಗೆ ಹೋದ ಕೂಡಲೇ ಧೊರೆಗಳ ದರ್ಶನವಾಯಿತು. ರಾಯರು ಧೊರೆಗಳ ಮುಖ ನೋಡಿದರು. ಎದೆ 'ಧಂ' ಎಂತು. ಕೈಕಾಲು ಬಿದ್ದು ಹೋಯಿತು. ಇವರು ಹಿಂದಿನ ದಿನ 'ಲೆಕ್ಚರ್ (Lecture)' ಹೊಡೀತಿದ್ದಾಗ, ಎದುರಿಗೆ ಒಬ್ಬ ಗೋಸಾಯಿ ನಿಂತಿದ್ದ. ಅವನ ಮುಖಕ್ಕೂ ಧೊರಗಳ ಮುಖಕ್ಕೂ ಹೋಲಿಕೆ ಕಂಡುಬಂತು. ಗೋವಿಂದರಾಯರ ತುಟಿ, ಗಂಟ್ಲು ಎಲ್ಲಾ ಒಣಗಿಹೋಯ್ತು. 'ಮಹಾರಾಜ' ಎನ್ನೋದು ಮಹಾ ಕಷ್ಟವಾ ಯಿತು.

''ಏನೂ ಭಯಪಡಬೇಡಿ. ನಾನೇನು ಹುಲಿಯಲ್ಲ!''

ಗೋವಿಂದರಾಯರಿಗೋ 'ಎಲ್ಲಾ ತಪ್ಪಾಯ್ತು ಮಹಾರಾಜ' ಎಂದು ಮೂಗುಹಿಡಿದುಕೊಂಡು ಕೆನ್ನೆಗೆ ಹೊಡೆದುಕೊಂಡು ಗಣೇಶ ನಿಗೆ ನಮಸ್ಕಾರ ಮಾಡುವಹಾಗೆ ಮಾಡಿ ಕಾಲಿಗೆ ಬಿದ್ದು ಹೇಳಬೇ ಕೆಂಬುದೇ ತೋರಿತು. ಆದರೆ ಅದಕ್ಕೆ ಸಮಯ ಸರಿಯಾಗಿರಲಿಲ್ಲ, ಏನು ಹೇಳಬೇಕೋ ತಿಳಿಯಲಿಲ್ಲ. ಅಷ್ಟು ಹೊತ್ತಿಗೆ ಅರಮನೆ ಮುಂದೆ 'ನಾಲಗ' ಕೇಳಿಸಿತು.

''ಅದೇನೋ ಸ್ವಲ್ಪ ವಿಚಾರಿಸಿ?''

ನಮ್ಮ—ರಾಯರಿಗೆ ಸ್ವಲ್ಪ ಉಸಿರಾಡೋ ಹಾಗಾಯಿತು. ಆಚೆ ಹೋಗಿ ವಿಚಾರಿಸಿ ಕೊಂಡು ಬಂದರು.

"ಮಹಾರಾಜ, ಮದುವೆ."

"ಯಾರದು?"

"ಕೇಳಲಿಲ್ಲ ಮಹಾಸ್ವಾಮಿ. ತಿಳಿದು ಬರುತ್ತೇನೆ."

ಹೋಗಿ ಬಂದದ್ದಾಯಿತು. "ವರ್ತಕ ನಾಗವರ್ಮನ ಮಗಳಿಗಂತೆ."

"ಯಾರಿಗೆ ಕೊಟ್ಟು?"

"ಗೊತ್ತಿಲ್ಲ ವಿಚಾರಿಸಲಿಲ್ಲ–ಮಹಾಸ್ವಾಮಿ."

ಮತ್ತೆ ಹೋಗಿ ವಿಚಾರಿಸಿಕೊಂಡು ಬಂದು, "ವರ್ತಕ ಸುಬ್ಬವರ್ಮನ ಮಗನಿಗಂತೆ–ಮಹಾಸ್ವಾಮಿ"

"ಎಲ್ಲಿ"

"ತಿಳಿಯದು, ಮಹಾಸ್ವಾಮಿ."

ಪುನಃ ಆಚೆ ಹೋಗಿ ವಿಚಾರಿಸಬೇಕಾಗಿ ಬಂತು. ಅಲ್ಲಿಂದ ಒಳಕ್ಕೆ ಬಂದು, ರಾಯರು, 'ದೊಡ್ಡ ಚೌಕದಲ್ಲಿರುವ ನಾಗವರ್ಮನ ಮನೆಯಲ್ಲಿ ಮಹಾಸ್ವಾಮಿ.' ಎಂದರು.

"ಹೆಚ್ಚು ವಿಚಾರಗಳು?"

"ನಾನು ವಿಚಾರಿಸಲಿಲ್ಲ ಮಹಾಸ್ವಾಮಿ. ಪುನಃ ಹೋಗಿ ಕೇಳಿಕೊಂಡು ಬರುತ್ತೇವೆ, ಅಪ್ಪಣೆ ಕೊಡಬೇಕು."

"ಬೇಡ, ಹೀಗೆ ಬನ್ನಿ."

ಗೋವಿಂದರಾಯರಿಗೆ ಧೊರೆಗಳು ಅಲ್ಲಿದ್ದ ಒಂದು ಆಸನವನ ಲಂಕರಿಸುವಂತೆ ಹೇಳಿದರು. ಅಷ್ಟು ಹೊತ್ತಿಗೆ ಸಾಯನಮಂತ್ರಿಗಳ ಸವಾರಿ ಅಲ್ಲಿಗೆ ಬಂತು. ಮಂತ್ರಿಗಳು ಬಂದೊಡನೆಯೇ ಧೊರೆಗಳಿಗೆ ನಮಸ್ಕರಿಸಿದರು. ಧೊರೆಗಳು ಅದನ್ನೂ ಇದನ್ನೂ ಕೇಳುತ್ತಾ, "ಆಜೆ ಗದ್ದಲದ ವಿಚಾರ ಸ್ವಲ್ಪ ತಿಳಿದುಕೊಂಡು ಬನ್ನಿ 'ಎಂದರು.

"ಆಗಬಹುದು, ಮಹಾಸ್ವಾಮಿ'

ಮಂತ್ರಿಗಳು ಹೊರಟರು; ಹದಿನೈದು ನಿಮಿಷಗಳಾದ ಮೇಲೆ, ಹಿಂತಿರುಗಿ ಬಂದು ' ವರ್ತಕ ನಾಗವರ್ಮನ ಮಗಳಿಗೆ ಮದುವೆ— ಎಂದರು.

"ಎಲ್ಲಿ?'

"ನಾಗವರ್ಮನ ಮನೆಯಲ್ಲಿ, ಮಹಾಸ್ವಾಮಿ"

"ಯಾರಿಗೆ ಕೊಟ್ಟು?"

"ವರ್ತಕ ಸುಬ್ಬವರ್ಮನ ಮಗ ಕೃಷ್ಣವರ್ಮನಿಗೆ, ಮಹಾಸ್ವಾಮಿ.'

"ಲಗ್ನ ವೆಷ್ಟು ಹೊತ್ತಿಗೆ?"

"ಸುಮಾರು ಹನ್ನೆರಡಿಕ್ಕಿಟ್ಟಿದ್ದಾರಂತೆ.....ತುಲಾಲಗ್ನದಲ್ಲಿ."

"ಹೆಚ್ಚು ವಿಚಾರಗಳು?"

"ವರನಿಗೆ ಮಾವನು ಹತ್ತುಸಾವಿರ ವರಹಗಳನ್ನು ಕೊಡುತ್ತಾನಂತೆ. ಕನ್ಯೆಗೆ ಸುಬ್ಬವರ್ಮನು ಹತ್ತುಸಾವಿರ ಬೆಲೆಬಾಳುವ ಒಡವೆಗಳನ್ನು ಹಾಕುತ್ತಾನಂತೆ, ಮಹಾಸ್ವಾಮಿ"

''ಹೀಗೆ ಕೂಡಿ ''

ರಾಜರು ಗೋವಿಂದರಾಯರ ಕಡೆಗೆ, ತಿರುಗಿ ''ಇದೇ ನಿನಗೂ ಪಂಕ್ತಿಗೂ ಇರುವ ವ್ಯತ್ಯಾಸ. ಇಂತಹ ಸಣ್ಣ ಸಣ್ಣ ವಿಚಾರಗಳಲ್ಲಿ ನನಗೆ ಬೇಕಾದ ಅಂಶಗಳಿಗೆ ಇಷ್ಟು ತೊಂದರೆಯಾದರೆ, ಇನ್ನು ರಾಜ್ಯ ವಿಚಾರ ತಮ್ಮಂಥವರ ಮೇಲೆ ನಿಂತರೆ, ರಾಜ್ಯಭಾರಕ್ರಮ ಹೇಗಾಗಬೇಕು! ಇನ್ನು ಮೇಲಾದರೂ ಗೊಣಗುಟ್ಟುವುದನ್ನು ಬಿಡು.'' ಎಂದು ಹೇಳಿ, ರಾಯರನ್ನು ಮನೆಗೆ ಕೊಟ್ಟು ಕಳುಹಿಸಿದರು.

ಅಂದಿನಿಂದಾಚೆಗೆ ಗೋವಿಂದರಾಯನು ಬೀದಿಬೀದಿಯಲ್ಲಿ ಚೌಕ ಚೌಕದಲ್ಲಿ ಉಪನ್ಯಾಸಗಳನ್ನು ಕೊಡುವುದನ್ನು ಬಿಟ್ಟನು. ಆದಾಗ್ಯೂ ಯಾರಾದರೂ ಮನೆಗೆ ಹೋದರೆ ಅವತ್ತು 'ನನಗದೇನು ಮೊಂಕು ಬಡಿದಿತ್ತೋ! ಅಷ್ಟು ತಿಳೀಲಿಲ್ಲವೆ! ಎಲ್ಲಾ ನನ್ನ ದುರದೃಷ್ಟ. ಎಲ್ಲೀ ಇಲ್ಲದ ಮೊಂಕು ನನಗೆ ಆವತ್ತೇ ಬರಬೇಕೆ! ' ಎಂದು ಗೊಣಗುಟ್ಟುತ್ತಿದ್ದ.



# ಸಿದ್ದನಬಸವ.

---

ತಿಮ್ಮ—"ಸಿದ್ದೇನಂತಾನೆ ನೋಡ್ಲೇ."

ರಾಮ—"ಏನಣ್ಣ-''

ತಿಮ್ಮ—"ಅಲ್ಲಲೆ-ಬಸ್ವ ಅತ್ತಾ ಗಾಡಿನಾದ್ರೂ ಎಳದು ಆಕತ್ತೈತಂತೆ !

ಈರ—"ಏನೋಣ್ಣ-ಎಂಗಿರೋದೋ-ಬಸ್ವ-''

ಸಿದ್ದ—"ನನ್ನ ಬಸ್ವನಿಗೊಂದು ಎಜ್ಜೇ ಅಂತೀನಿ ! ಮೊನ್ನೆ ಸಂತ್ಯಾಗ-ಏನಾಪ್ರಮಣ್ಣ, ನೀಕಾಣ್ಯಾ? ಇರ್ಲಿ ಬಿಡ್ಲೇ, ಅದರ ಮೇಗೆ ನಂದು ನೂರು ರೂಪಾಯಿಡ್ತೀನಿ.'

ಸಿದ್ದ ಬಸವನ್ನ ಚೆನ್ನಾಗಿ ಸಾಕಿದ್ದ. ಅವನಲ್ಲಿ ಎತ್ತಿದ್ದದ್ದು ಒಂದೇ ಜೊತೆ. ಒಕ್ಕಲತನವೆಲ್ಲಾ ಅದರಲ್ಲೇ ನಡಿಸುತ್ತಿದ್ದ. ಅದರ ಪೈಕಿ ಇವನಿಗೆ ಬಸವನ ಮೇಲೆ ಪ್ರಾಣ. ಆ ಊರು ಸುತ್ತ ಮುತ್ತ ಇನ್ನೆಲ್ಲೀ ಅಂಥಾದ್ದೇ ಇಲ್ಲ. ಕೆಲವರು ಅಂದರು-ಅದು ಸಿದ್ದನ ಕೈಗುಣ ಅಂತ; ಮತ್ತೆ ಕೆಲವರು-ಹೋರಿಜಾತೀನೇ ಅಂಥಾದ್ದು; ಇನ್ನು ಕೆಲವರು ಅವನು ಚನ್ನಾಗಿ ಸಾಕುತ್ತಾನೆ, ಅದಕ್ಕೇ ಹಾಗಿರೋದು; ತನಗೆ ಹಿಟ್ಟಿಲ್ಲದೇ ಇದ್ದರೂ ಅವಕ್ಕೇ ಮೊದಲು ಹುಲ್ಲು ಹುರುಳಿ ಹಾಕುತ್ತಾನೆ.— ಹೀಗೇ, ಒಬ್ಬೊಬ್ಬರೂ ಅವರಿಗೆ ತೋಚಿದಹಾಗೆ ಹೇಳುತ್ತಿದ್ದರು. ಆದರೆ ಎಲ್ಲರೂ ಬಸವನ ಸಮಾನ ಎತ್ತೇ ಇಲ್ಲ ಅನ್ನುತ್ತಿದ್ದರೇ ವಿನಹ ಬೇರೆಯಿಲ್ಲ.

ಹೀಗಿದ್ದಾಗ, ಸಿದ್ದ ಅದರ ಮೇಲೆ ನೂರು ರೂಪಾಯಿ ಇಟ್ಟಿದ್ದು ಹೆಚ್ಚೇ? ಇಷ್ಟಕ್ಕೆ ಬಂದಮೇಲೆ ತಿಮ್ಮ ಸುಮ್ಮನಿರೋಕಾಗುತ್ತೇ? ಅವನೂ ನೂರಿಟ್ಟ. ಸರಿ. ನಾಲ್ಕಾರು ಜನ ಸೇರಿದರು. ಆಗಲೇ ಬಸವನ್ನ ತರಿಸಿ ಗಾಡಿಗಳಿಗೆ ಕಟ್ಟೋದಕ್ಕೆ ಸಿರ್ಧರವಾಯಿತು. ಬೋರ ಬಸವನ್ನ ಹಿಡಿದುಕೊಂಡು ಬಂದ. ಅಷ್ಟು ಹೊತ್ತಿಗೆ ಊರಲೆಲ್ಲಾ ಇದು ಪ್ರಕಾರಾಯಿತು. ಎಲ್ಲಿಯೋರಲ್ಲ ಅವರವರ ಕೆಲಸ ಬಿಟ್ಟು ನೋಡೋದಕ್ಕೆ ಬಂದುಬಿಟ್ಟರು. ಹತ್ತು ಗಾಡಿ ಸೇರಿಸಿದರು; ಚೆನ್ನಾಗಿ ಬಿಗಿದುಕಟ್ಟಿ ಬಸವನ್ನ ಅದಕ್ಕೆ ಕಟ್ಟಿದರು. ಗೌಡ ಕುಂಚಪ್ಪ ಬಂದು ಎದುರಿಗೆ ನಿಂತುಕೊಂಡು ದುಪಟೀನ ಎಡಭುಜದಮೇಲೆ ಎಗರಿ ಹಾಕಿಕೊಂಡು ಆಗಾಗ ‹ಲೇ–ಟ್ರ್–ಸುಮ್ಮನಿರೋ' ಎಂದು ಉಸ್ತಾ್ತ್ವರತಗೋತ ನಿಂತಿದ್ದ. ಎಲ್ಲಾ ಸಿದ್ಧವಾದಮೇಲೆ ಸಿದ್ದ ಬಾರುಕೋಲು ತೆಗೆದುಕೊಂಡು ಬಂದು ಮುಂದೆ ನಿಂತ ಎಲ್ಲಾರೂ ‹ಉ–ಬಿಡಿ,ಬಿಡಿ› ಎಂದರು. ಸಿದ್ದ ‹ಲೇ–'ಎಂದು ಬಾರುಕೋಲಿನಿಂದ ಬಸವನ ಬೆನ್ನುಮೇಲೊಂದು ಬಿಟ್ಟ. ಒಳ್ಳೇ ಮಾಲೀಸ ಮಾಡಿಬಿಟ್ಟ ಕುದರೆ ಬೆನ್ನಿದ್ದ ಹಾಗಿದ್ದದರ ಮೇಲೆ ಒಂದು ಗೀರು ಬಿತ್ತು. ಬಸವ ‹ ಖ್ಗ ' ಎಂದು ಸುಮ್ಮನೆ ನಿಂತಿತು. ಇನೊಂದು ಬಿಟ್ಟ; ಬಸವ ಕದಲಲಿಲ್ಲ. ಮತ್ತೊಂದು ಬಿಟ್ಟ ಮುಂದಕ್ಕೆ ಒಂದು ಹೆಜ್ಜೆಕೂಡ ಇಡಲಿಲ್ಲ. ಕೊಂಬನ್ನು ಬಗ್ಗಿಸಿ ದುರದುರ ನಿಂತುಬಿಟ್ಟಿತು. ಎಲ್ಲಾರೂ ಗೊಳ್ಳೆಂದು ನಕ್ಕಿಬಿಟ್ಟರು. ಸಿದ್ದ ಬಾರುಕೋಲಿನಿಂದ ಚನ್ನಾಗಿ ಬಾರಿಸಿ ಬಿಟ್ಟ. ಮೈಯಲ್ಲಾಗಾಯವಾಯಿತು; ಆದರೂ ಬಸವ ಅಡ್ಡಾಡಲಿಲ್ಲ.

ತಿಮ್ಮನಿಗೆ ನೂರು ರೂಪಾಯಿಬಂತು. ಸಿದ್ದ ಬಸವನ್ನ ಬೈಯುತ್ತ ಮನೆಗೆ ಬಂದ ಬೋರ ಬಸವನ್ನ ತಂದು ಕೊಟ್ಟಿಗೇಲಿ

ಕಟ್ಟಿ ಅದರ ಮುಂದೆ ಒಂದು ಹಿಡಿ ಹುಲ್ಲುಹಾಕಿ ಹೋದ. ಸಾಯಂ ಕಾಲವಾಯಿತು. ದೀಪ ಹಚ್ಚೋಹೊತ್ತಿಗೆ ದನಕರು ಎಲ್ಲಾ ಬಂತು. ಅದನ್ನೆಲ್ಲಾ ಕಟ್ಟಿ ಊಟ ಆದಮೇಲೆ ಆ ಕೊಟ್ಟಿಗೇಲೇ ಬಂದು ಮಲಗಿದ.

ರಾತ್ರಿ ಬಹಳ ಹೊತ್ತಾದರೂ ನಿದ್ದೆ ಬರಲಿಲ್ಲ. ನೂರು ವರಹ ಹೋದದ್ದು, ಹಾಗೇ ಯೋಚನೆಮಾಡುತ್ತಾ ಮಲಗಿದ್ದ. ಬಲಗಡೆ ಏನೋ ''ಸರಸರ' ಎಂದ ಹಾಗಾಯಿತು. ತಿರುಗಿ ನೋಡಿದ ಕರೀ ಎತ್ತು, ಬಸವನ ಮೈ ಎಲ್ಲಾ ನಾಕುತ್ತಿತ್ತು. ಕಣ್ಣಿನಲ್ಲಿ ನೀರು ಸೋರಿಸುತ್ತಾ. ಆಗಾಗ ಬಸವನ ಕತ್ತನ್ನ ನಾಲಿಗೆಯಿಂದ ಸವರು ತ್ತಿತ್ತು. ನೋಡುತ್ತಾ ಹಾಗೆಯೇ ಕಣ್ಣು ಮುಚ್ಚಿದ. ಯಾರೋ ಮೆಲ್ಲನೆ ಮಾತನಾಡಿದ ಹಾಗೆ ತೋರಿತು.

''ಅಲ್ಲೋ ಬಸವ—ಹೀಗೆ ಮಾಡೋದೇನೊ?''

''ನಂದೇನೂ ತಪ್ಪಿಲ್ಲ. ಅಲ್ಲ, ಹಾಗೆ ಬಾರುಗೋಲಿನಿಂದ ಹೊಡೆದರೆ ಹೇಗಾಗುತ್ತೋ—ಹಾಗೆ ಹೊಡೆದ, ನಾನೇನು ಮಾಡಲಿ?'

''ಹೊಡೆದರೇನೋ? ನಿನಗೆ ನೋವಾಗುತ್ತೆ ಎಂಬೋದು ಗೊತ್ತಿದ್ದರೆ ಯಜಮಾನ ಹೊಡೀತಾನೇ ಇರಲಿಲ್ಲ.''

''ಅದಕ್ಕೇ ಬುದ್ಧೀ ಕಲಿಸಬೇಕು ಎಂದು ಈ ಕೆಲಸಮಾಡಿದೆ.''

''ಅನ್ಯಾಯ—ಇಷ್ಟುದಿನ ಸಾಕಿದ್ದಕ್ಕೆ ಒಂದೇಟು ಹಾಕಿದರೇನು

''ನನ್ನೊಬ್ಬನನ್ನೇ ಅಲ್ಲ, ಎಲ್ಲಾರನ್ನೂ ಎಲ್ಲಾರೂ ಹೀಗೇ ಹೊಡೀತಾರೆ ಇದ್ದದ್ದರಲ್ಲಿ ನನ್ನ ಮೇಲೇ ಸ್ವಲ್ಪವಾಸಿ; ಅಷ್ಟ

ಹೊಡಿಯೋದಿಲ್ಲ. ಇದನ್ನು ಬಿಡಿಸಿ ಬಿಡಬೇಕು. ಎಷ್ಟು ಗೋಳಿಟ್ಟರೂ, ನಮ್ಮ ಕಷ್ಟ ಅವರಿಗೆ ತಿಳಿಯೋದಿಲ್ಲ. ಅದಕ್ಕೇ ಈ ಉಪಾಯ ಮಾಡಿದೆ ''

''ನೀನೇನೋ ಮಾಡಿದೆ. ಯಜಮಾನನಿಗೆ ಇದು ತಿಳಿಯೋದು ಹೇಗೆ?'

''ಇರಲಿ. ಇನ್ನೊಂದು ಸಲ ಜೂಜು ಕಟ್ಟಲಿ, ಹತ್ತಲ್ಲ ಇಪ್ಪತ್ತು ಗಾಂಡಿ ಎಳೆದು ಹಾಕುತ್ತೇನೆ. ಹೊಡೆದರೆ ನನಗೆ ನೋವಾಗುತ್ತೆ ನಾನೆಳೆಯೋದೇಯಿಲ್ಲ. '

''ಇಷ್ಟೇಕೆ, ಬೆಳಗ್ಗೆ ಯಜಮಾನನೇ ಬರುತ್ತಾನೆ. ನೆವರೋಕೆ ಮೈನೋಡಿ ಅವನೇ ಪಶ್ಚಾತ್ತಾಪ ಪಡುತ್ತಾನೆ. ಆದರೆ ಹೋದ ನೂರು ರೂಪಾಯಿ ಅವನಿಗೆ ಬರೋಹಾಗೆ ಮಾಡಬೇಕು.''

''ಅದಕ್ಕೇನು, ಈ ಸಲ ಇನ್ನೂರು .. ''ಬಾಜಿ' ಇಡಲಿ''

''ಬೆಳಗ್ಗೆ ಕೋಳಿಕೂಗೋಹೊತ್ತಿಗೆ ಬೋರನು ಕಣ್ಣುಬಿಟ್ಟ. ಎದ್ದು ಹುಲ್ಲು ಬಾಚಿಕೊಂಡು ಬಂದು, ಎಲ್ಲಾಪಶುಗಳ ಮುಂದೇನೂ ಹಾಕಿದ ಮೂಲೇಲಿ ಕಟ್ಟಿದ್ದ ಹಸು ಬೆನ್ನಿನ ಮೇಲೆ ಕೈಯಾಡಿಸಿ, ಆಚೆ ಹೊರಟ ಕಾಲು ಆಚೆಗೆ ಇಡೋದರೊಳಗಾಗಿ, ಬಾಗಿಲಿನ ಹತ್ತಿರ ಕಟ್ಟಿದ ಕರು. ಕಾಲನ್ನು ನಾಕಿತು. ಬೋರ ಬೆಚ್ಚಿ ಬಿದ್ದು ನೋಡಿ, ''ಅಲೆ-ಲೆ-ಬಾ'' ಎನ್ನುತ್ತ, ಇನ್ನೂ ಸ್ವಲ್ಪ ಒಳಕ್ಕೆ ಕಟ್ಟಿ ಬಿಟ್ಟುಹೋದ.

ಏಳುಗಂಟೆ ಸಮಯ. ಹಿಮ ಬಿದ್ದಿದ್ದು ಇನ್ನೂ ಪೂರ್ತಿಯಾಗಿ ಇಂಗಿರಲಿಲ್ಲ. ಸಿದ್ದ ಕಂಬಳಿ ಹೊದ್ದುಕೊಂಡು ಬಾಗಲಲ್ಲಿ ನಿಂತಿದ್ದ. ಎದುರಿಗೆ ಬೋರ, 'ನನಗೇನೋ ಅಂಗೆ ಕೇಳಿತು-ಅದೇಗಿರೋದೋ-'

ಸಿದ್ದ—"ಬಿಡ್ಲೆ, ಎಲ್ಲಾದರೂ ಉಂಟಾ–ಬಸ್ವಮಾತಾಡೋದು ಅಂದರೇನಂತೀನಿ!"

ಬೋಧ—"ಅದೆಂಗಿರೋದೋ ಏನೋ, ಈ ಸಾರ್ತಿ ಕಟ್ಗೋಡೋತಂಕ ನಂಗೇನೋ ಅಂಗಂಗೇ."

ಸಿದ್ದ—"ಅದೇನ್ಕತೆಯೋ ಏನೋ ಕಾಣೋ—"

ಮಧ್ಯಾನ್ಹ ಒಂದು ಗಂಟೆ ಹೊತ್ತಿಗೆ ಊರ ಹೊರಗೆ ಎಲ್ಲಾ ಸೇರೋ ಪದ್ಧತಿ. ಅವತ್ತೂ ಸೇರಿದರು. ಒಬ್ಬೊಬ್ಬರೂ ಎಲೆ ಅಡಿಕೆ ಆಗಿಯುತ್ತಾ ಮಾತಾಡಲೂ ಮೊದಲು ಮಾಡಿದರು.

ತಿಮ್ಮ—"ಅಲ್ಪಲೇ ಬಸ್ಪ ಒಳ್ಳೇ ಕೈಕೊಟ್ಟ!"

ಈರ–ಎತ್ತೇನು ಕಮ್ಮಾ ಅಂತೀರ–ಅದೇನೋ ಅಂಗಾಗ್ಬಿಡಿತು.

ತಿಮ್ಮ—ಇಲ್ಲಪ್ಪ! ಬಿಡ ಅತ್ಲಾಗೆ–ಏನ್ಮಹಾ, ಅತ್ತುಗಾಡಿ ಎಳೆದಾಕೋಕೆ ಸಾಮಾನ್ಯಾವಾ, ಏನಪ್ರಮಣ್ಣಾ?"

ರಾಮು—"ಬಿಡ್ಲೆ ? ಎತ್ಲಾಗಿನಮಾತು – ಅತ್ತೂ ಇಲ್ಲ ಇಪ್ಪತ್ತೂ ಯಿಲ್ಲ—ಸೋಜಿಗಾವ ಸಿದ್ದನಮಾತು ಬಿಡಂದರೆ."

ತಿಮ್ಮ—"ಇಲ್ಲೇ ಅವನಲ್ಲ—ಏನ್ಸಿದ್ದಪ್ಪ"

ಸಿದ್ದ—"ಮಾತ್ಯಾಕೆಲ್ಲ—ಏನೋ ಅಂಗಾಯ್ತು ಈಗ್ಲೂ ಒಂದು ಕೈ ಅಂತೀನಿ"

ರಾಮು—"ಏನ್ನಪ್ಪ, ಭೀಮು–ಇಗ್ಲೂಸೈ ಎಳೆದ್ಹಾಕ್ಬಿಡ್ಲಿ, ಇನ್ನೂರಲ್ಲ ಮುನ್ನೂರು ಮಡಗಿಬಿಡ್ತೀನಿ—ಬಿಡ್ಲೆ"

ಈರ—"ಕಟ್ಟೆ ಬಿಡ್ಲೆ–ಅದೆಂಗಾಗ್ತೈತೋ ನೋಡೇಬಿಡೋಣ. ಬಸ್ವ ತೆಗೆದು ಹಾಕೋದಾ."

ತಿಮ್ಮ—"ತೆಗದು ಹಾಕೋದಾ?—ಮುಂದೆ ಜೋಳದ ಕಡ್ಡಿ ಹಾಕಿದರೆ ಒಂದು ಬಂಡಿಯಾದರೂ ಬೊಡತ್ತೈತೆ. ಅತ್ತು ಗಾಡಿ ಎಳೆದ್ಹಾಕಿಬಿಡ್ಲಿ—ನಾನ್ಕೇಳಿದಷ್ಟು ಕೊಡ್ತೀನಿ"

ಬೋರ—(ಸಿದ್ದನಕಿವಿಯಲ್ಲಿ) "ಒಳ್ಳೇಸಮಯ-ಕಟ್ಬಿಬಿಟ್ರೆ ಒಂದು ಕೈ-

ಸಿದ್ದ—"ಎಳೆದರೆ ಏನ್ಕೊಡ್ತೀಲಿ-ಅದೂ ಒಂದು ಮಾತೇ ಅಂತೀನಿ,

ತಿಮ್ಮ—"ಎಳೆದರೆ ನಾವೆಲ್ಲಾ ಸೇರಿ—ಮುನ್ನೂರಾದರೂ ಕೊಟ್ಟು ಬಿಡ್ತೇವೇಳೋ."

ಸಿದ್ದ—"ಇವತ್ತು ಬಸವನ ತಾಕತ್ತು ಬೈಲಿಗೆ ಬರ್ತೈತೆ.

ಹಿಂದಿನದಿನ ಮಾಡಿದಂತೆ ಹತ್ತು ಗಾಡಿಗಳನ್ನು ಎಳೆದು ಕೊಂಡು ಒಂದು, ಒಂದರ ಹಿಂದೆ ಮತ್ತೊಂದನ್ನು ಕಟ್ಟಿದರು ಮುಂದೆ ಹಾಕಿದ ಒಂಟೆತ್ತಿನ ಗಾಡೀಗೆ ಬಸವನ್ನ ಕಟ್ಟಿದರು ಎಲಾ ಅಣಿಯಾಯಿತು. ಬೋರ ಒಂದಷ್ಟು ಬೆಲ್ಲ ಹುರುಳಿ ಸೇರಿಸಿ, ಒಂದು ಜೊಗಸೆ ತುಂಬಿ ತಂದು ಬಸವನಿಗೆ ತಿನ್ನಿಸಿಬಿಟ್ಟು, ಬೆನ್ನು ಸವರಿದ. ಸಿದ್ದ, ಗಾಡಿಯೊಳಗೆ ಮೆಲ್ಲನೆ ಹತ್ತಿ, ಬಸವನ ಬೆನ್ನು ಮುಟ್ಟಿ, 'ಬಸ್ವ-ನಡಿಯೋ' ಎಂದು ಹಗ್ಗ ಎಳೆದ. ಬಸವ ಸ್ವಲ್ಪವೂ ತಂಟೆ ಮಾಡದೆ ನಡಿಯೋದಿಕ್ಕೆ ಮೊದಲು ಮಾಡಿತು. 'ಓಡಲೇ-ಕೈಕ್ರ್ರ' ಎಂದು ಬಾರಮುಟ್ಟಿ, ಪಿರ್ರೇಮೇಲೆ ತಟ್ಟಿದ. ಓಡೋದಕ್ಕೆ ಮೊದಲಾಯಿತು. ಆ ಊರುಸುತ್ತಲೂ ತಿರುಗಿಕೊಂಡು ಹೊರಟ ಸ್ಥಳಕ್ಕೆ ಬಂದು ನಿಂತಿತು.

ಎಲ್ಲರಿಗೂ ಬಹಳ ಆಶ್ಚರ್ಯವಾಯಿತು. ಸಿದ್ದನಿಗೆ ಮುನ್ನೂರು ರೂಪಾಯಿ ಬಂತು; ಬೋರನಿಗೆ ಒಂದು ಹೊಸ ದುಪಟಿ.

---

# ಅದೃಷ್ಟ.

ನನ್ನ ಹೆಸರು ಗಾಗಿನಾರ. ನಾನು ಹುಟ್ಟಿದ್ದು ನೇಪಲ್ಸ ಪಟ್ಟಣ. ನನ್ನ ತಂದೆ ತಾಯಿಗಳು ದೊಡ್ಡವಂಶಕ್ಕೆ ಸೇರಿದವರಾದರೂ. ನನ್ನ ತಂದೆಯು ಆಡಳಿತದಿಂದ ನಮಗಿದ್ದ ಸಂಪತ್ತೆಲ್ಲವೂ ಮಾಯವಾಗುತ್ತ ಬಂತು. ನಮ್ಮಲ್ಲಿ ಆಸ್ತಿಯೆಲ್ಲಾ ದೊಡ್ಡಮಗನ ಪಾಲೇ. ನಾನಾದರೋ ಕಿರಿಯವ. ನಮ್ಮ ತಾಯಿ ಬದುಕಿರುವವರೆಗೂ ನನ್ನ ಮಾತೇ ಮಾತು. ಆವಳಿಗೆ ನನ್ನ ಮೇಲಿದ್ದ ಪ್ರೀತಿಯು ಅಷ್ಟಿಷ್ಟಲ್ಲ. ಇದರಿಂದಲೇ ಕೊನೆಗೆ ನನಗೆ ಬಹಳ ಕೇಡಾಯಿತು. ಚಿಕ್ಕಮಗುವಾದಾಗಿನಿಂದಲೂ ನನಗೆ ಸಂಗೀತವೆಂದರೆ ಪ್ರಾಣ. ನಮ್ಮ ತಾಯಿಯು ಕಾಲವಾಗುತ್ತಲೇ ನನ್ನ ಗತಿಯು ಅತಿ ಹೇಯವಾಯಿತು. ನನ್ನ ಮುಂಗೋಪ ಕೇಳುವರಾರು! ಬಡವನ ಕೋಪ ದವಡೆಗೆ ಮೃತ್ಯು. ಮನೆಯಲ್ಲಿ ಕೊನೆಕೊನೆಗೆ ನನಗೆ ಸ್ಥಳವಿಲ್ಲದಂತಾಗಿ ನನ್ನ ತಂದೆಯು ನನ್ನನ್ನು ಒಂದು ಮಠ (Church) ಕ್ಕೆ ತೆಗೆದುಕೊಂಡುಹೋಗಿ ಬಿಡಬೇಕೆಂದು ನಿರ್ಧರಿಸಿದನು.

ನಮ್ಮ ತಂದೆಗೂ ನನಗೂ ಅಷ್ಟಷ್ಟೆ. ಇದಕ್ಕೆ ಕಾರಣ ಆತನ ಜಬರುದಸ್ತು. ಯಾವಾಗಲೂ ಸೇನಾಧಿಪತಿ ಇದ್ದಹಾಗೆಯೇ ಇರೋಣ. ಒಳ್ಳೇ ಮಾತಾಡಲಿ ಅಥವಾ ಕೆಟ್ಟ ಮಾತಾಡಲಿ ಒಂದೇ ಧ್ವನಿ. ಆತನನ್ನು ಕಂಡರೆ ನನಗೆ ಹೆದರಿಕೆ ಹೆಚ್ಚಾಗಿತ್ತೇ ವಿನಹ ಪ್ರೀತಿಯುಷ್ಟಿರಲಿಲ್ಲ. ಅಲ್ಲದೆ ಮನಸ್ಸಿನಲ್ಲಿ ನನ್ನ ಅಣ್ಣನಿಗಾಗಿ, ಎಲ್ಲರನ್ನೂ, ನನ್ನನ್ನೂ ಮೂಲೆಗೆ ಒತ್ತಿ ಕೂಡಿಸಿ ಬಿಟ್ಟನಲ್ಲಾ, ಎಂಬುವ ರೋಷ ಬೇರೆ

ನನ್ನನ್ನು ಬಾಧಿಸುತ್ತಿತ್ತು. ಇದಕ್ಕೆ ತಕ್ಕ ಹಾಗೇ ನನ್ನ ಚಿಕ್ಕಪ್ಪನು ಸನ್ಯಾಸವನ್ನು ಸ್ವೀಕರಿಸಿದ್ದ. ಆತನ ಕೈಕೆಳಗೆ ನನ್ನನ್ನು ಹಾಕಿಬಿಟ್ಟರು.

ಸನ್ಯಾಸಿ (Monks) ಗಳ ಪಾಡೇನೆಂದು ಹೇಳಲಿ. ಪ್ರಪಂಚದಲ್ಲಿನ ಮನೋಹರವಾದ ವಸ್ತುಗಳೆಲ್ಲವನ್ನೂ ಬಿಟ್ಟು, ಒಂದು ಕತ್ತಲ ಗವಿಯಲ್ಲಿ ಕೂತು, ತಮ್ಮ ಮೈಗೆಷ್ಟು ತೊಂದರೆ ಕೊಟ್ಟರೆ ಅಷ್ಟು ಮೋಕ್ಷ ತಮಗೆ ಸಿಗುತ್ತೆಂಬ ಮತದಿಂದ ತಮ್ಮ ಕೈಲಾದ ಮಟ್ಟಿಗೂ ತೊಂದರೆ ಕೊಡುವುದರಲ್ಲೇ ಆಶಕ್ತರಾಗಿರುವುದನ್ನು ನೋಡಿ ನನ್ನ ಮನಸ್ಸು ಕೆಟ್ಟಿತು. ಇನ್ನು ಚಿಕ್ಕವಯಸ್ಸಿನಲ್ಲೇ ಈ ಕೂಪದಲ್ಲಿ ನನ್ನನ್ನು ನನ್ನ ತಂದೆಯು ತಳ್ಳಿದ್ದರಿಂದ ಕೆಲವು ವರ್ಷಗಳಲ್ಲಿಯೇ ನಾನು ನಾಸ್ತಿಕನಾದೆ; ಯಾರನ್ನು ಕಂಡರೂ ದ್ವೇಷವೇ. ನನ್ನನ್ನೇ ನಾನು ದ್ವೇಷಿಸುತ್ತಿದ್ದೆ. ಪ್ರೀತಿಮಯವೆಂದು ಸಾರಿರುವುದನ್ನೆಲ್ಲಾ ಬಿಟ್ಟು, ಎಲ್ಲೆಲ್ಲಿ ನೋಡಿದಾಗ್ಯೂ ನನ್ನ ಕಣ್ಣಿಗೆ ದ್ವೇಷಾಸೂಯೆಗಳೇ ಕಾಣಬರುತ್ತಿದ್ದವು.

ಆದಾಗ್ಯೂ ಇಲ್ಲಿ ನಾನು ಅತ್ಯುತ್ತಮವಾದ ಕಾರ್ಯದಲ್ಲಿ ಆಸಕ್ತನಾಗಿದ್ದೆ. ಇಲ್ಲಿದ್ದ ಸನ್ಯಾಸಿಗಳ ಪೈಕಿ ಒಬ್ಬಾತನು ಒಳ್ಳೊಳ್ಳೆಯ ಚಿತ್ರಗಳನ್ನು ಬರೆಯುತ್ತಲೂ, ಅವುಗಳಿಗೆ ಬಣ್ಣ ಹಾಕುವುದರಲ್ಲಿ ಬಹಳ ಚತುರನಾಗಿದ್ದ. ಆತನೊಡನೆ ಕೆಲವು ಕಾಲ ಓಡಾಡುತ್ತಾ, ನನಗೂ ಅದರ ವಿಚಾರ ಸ್ವಲ್ಪಮಟ್ಟಿಗೆ ತಿಳಿದಂತಾಯಿತು. ಇದೊಂದು ವಿಚಾರಬಿಟ್ಟರೆ, ಮಿಕ್ಕಿದುದೆಲ್ಲಾ, ನನ್ನ ಜೀವಮಾನದಲ್ಲಿ ಒಂದು ದೊಡ್ಡ ಕಗ್ಗತ್ತಲೆ. ಹೀಗಿರಲು ಒಂದುದಿನ ನೇಪಲ್ಸ ಪಟ್ಟಣದೊಳಗೆ ಕೆಲಸವನ್ನು ಮಾಡುವುದಕ್ಕಾಗಿ ಇಬ್ಬರನ್ನು ಕಳಿಸಿಕೊಡಬೇಕಾಗಿ

ಬಂತು. ನನ್ನ ಚಿಕ್ಕಪ್ಪನು ನನ್ನನ್ನು ಮತ್ತೊಬ್ಬ ಸನ್ಯಾಸಿ (Monk) ಇಬ್ಬರನ್ನೂ ಕಳಿಸಿಕೊಟ್ಟನು. ಹದಿನಾರು ವರ್ಷದವರೆಗೂ ಕಗ್ಗತ್ತಲೆಯಲ್ಲಿದ್ದ ನನಗೆ ಈಗ ಸೂರ್ಯರಶ್ಮಿಯು ಬಿದ್ದಂತಾಯಿತು. ನಮ್ಮ ಮಠವನ್ನು ಬಿಟ್ಟ ಕಾಲು ಗಂಟೆಯೊಳಗಾಗಿ ನನ್ನ ಬುದ್ಧಿಯು ಬದಲಾಯಿಸಿತು. ಪುನಃ ಮಠದೊಳಕ್ಕೆ ಬರಕೂಡದೆಂದು ನಿರ್ಧರಮಾಡಿಕೊಂಡೆ. ನನ್ನ ಜೊತೆಯಲ್ಲಿದ್ದ ಸನ್ಯಾಸಿಯು ವ್ಯಾಪಾರಮಾಡಲು ಒಂದು ಅಂಗಡಿ ಬಳಿನಿಂತಾಗ, ನಾನು ಪಕ್ಕದಲ್ಲಿದ್ದ ಒಂದು ಸಂದಿಯಲ್ಲಿ ದೂರಿ ಕಾಲಿಗೆ ಬುದ್ಧಿಹೇಳಿದೆ.

ಸುಮಾರು ಹದಿನೈದು ನಿಮಿಷಗಳವರೆಗೆ ಓಡಿರಬಹುದು. ಹಿಂತಿರುಗಿ ನೋಡಿದೆ. ನನ್ನನ್ನು ಯಾರೂ ಹಿಂಬಾಲಿಸಿರಲಿಲ್ಲ, ಅಲ್ಲೇ ಸ್ವಲ್ಪ ಹೊತ್ತು ನಿಂತು ಯೋಚನೆಮಾಡಿದೆ. ನಮ್ಮ ಮನೆಗುರುತ್ತು ಸಿಗೇಲಿ ಹಾಗಿಲ್ಲ, ನಾನು ಬಿಟ್ಟು ಹದಿನಾರು ವರ್ಷವಾಯಿತು. ಆಗಿದ್ದಾಗೂ ನೋಡೋಣವೆಂದು ಅವರಿವರನ್ನು ಕೇಳುತ್ತಾ ಕೊನೆಗೆ ನಮ್ಮ ಮನೆಗೆ ಹೋದೆ. ಬಾಗಿಲಲ್ಲಿದ್ದವರು ಒಳಕ್ಕೆ ಬಿಡುವುದಿಲ್ಲವೆಂದರು. ಅವರಿಗೆ ನನ್ನ ಹೆಸರನ್ನು ಹೇಳಿ, ನನ್ನ ತಂದೆಯನ್ನು ನೋಡಲು ಬಂದಿದೇನೆಂದು ತಿಳಿಸಿದೆ. ಅವರು ಒಳಕ್ಕೆ ಬಿಟ್ಟಮೇಲೆ, ನಮ್ಮ ತಂದೆಯ ಬಳಿಗೆ ಹೋದೆ. ಆತನು ಸ್ವಲ್ಪವೂ ಬದಲಾಯಿಸಿರಲಿಲ್ಲ. ಮನೆಯ ಆಳನ್ನು ನೋಡಿದಂತೆ ನನ್ನನ್ನು ನೋಡಿ, ಕುಂಟು ಕುರುಡರಿಗೆ ಅನ್ನಹಾಕಲು ಒಪ್ಪುವಂತೆ, ನಾನು ಆಮನೆಯಲ್ಲಿರಲು ಅನುಮತಿಯನ್ನಿತ್ತ. ನನ್ನ ಅಣ್ಣನಾದರೂ, ನನ್ನ ಮೇಲೆ ಸ್ವಲ್ಪವೂ ಪ್ರೀತಿಯನ್ನು ತೋರಿಸಲಿಲ್ಲ. ಸಕಲ ಅಧಿಕಾರವನ್ನು ಈಗ ಅವನೇ ವಹಿಸಿದ್ದನಾಗಿ, ಏನೋ ಎಲ್ಲಿಯೂ ಸ್ಥಳವಿಲ್ಲದೆ ಇಲ್ಲಿಗೆ ಬಂದಿದ್ದಾನೆ, ಹೋಗಲಿ ಇದ್ದುಬಿಡಲಿ,

ಎಂದ ಹಾಗೆ ಮಾತನಾಡಿದ. ನನಗೆ ಮನಸ್ಸಿಗೆ ಬಹಳ ವ್ಯಸನವಾಯಿತು. ಇನ್ನು ಮುಂದೆಯಾದರೂ ಸರಿಹೋಗಬಹುದೆಂದು ಅಲ್ಲಿಯೇ ನಿಂತೆ.

ಬರುತ್ತ ಬರುತ್ತ ತೊಂದರೆಗಳೇ ಬಹಳವಾದವು. ಸೇವಕರೂ ಸಹ ನನ್ನನ್ನು ಹೀಯಾಳಿಸಲು ಮೊದಲು ಮಾಡಿದರು. ಅದರೊಳಗಾಗಿ ನನ್ನ ತಂದೆಯ ಕೇವಲ ಆಪ್ತಸೇವಕನಾದ ಕಳಕನಂತೂ ನನ್ನನ್ನು ಪಶುಗಿಂತಲೂ ಕಡೆಯಾಗಿ ಭಾವಿಸುತ್ತ, ತಾನೇ ನನಗಿಂತ ದೊಡ್ಡ ಮನುಷ್ಯನೆಂಬುವುದನ್ನು ನನಗೆ ತೋರಿಸುವಂತೆ ಕುಚೇಷ್ಟೆ ಮಾಡುತ್ತಿದ್ದನು. ಹೀಗೆಯೇ ಸುಮಾರು ಒಂದು ತಿಂಗಳವರೆಗೆ ನಡೆಯಿತು, ನನ್ನ ಮೈಕೈಯೆಲ್ಲಾ ಉರಿಯಲಾರಂಭಿಸಿತು. ಇದಕ್ಕಿದ್ದ ಹಾಗೇ ಒಂದುದಿನ ಕಳಕನು ನನ್ನ ಕೋಣೆಯೊಳಕ್ಕೆ, ನಾಥಹೊಡೆಯುವ ನೀರನ್ನು ತಂದಿಟ್ಟನು, ನನಗೆ ಕೋಪಬಂತು

"ಇಂತಹ ನೀರೇನಯ್ಯಾ, ನನಗೆ ತಂದಿಡುವುದು ?''

''ಬೇರೆ ನೀರಿರಲಿಲ್ಲವಾದ್ದರಿಂದ, ನಾವೆಲ್ಲಾ ಕೈತೊಳಕೊಂಡ ಮೇಲೆ ಆನೀರನ್ನು ನಿಮಗಾಗಿ ತಂದಿದ್ದೇನೆ.''

"ಬೇರೇನೀರಿಲ್ಲ, ಭಾವಿಯಲ್ಲಿ ನೀರೇ ಇಲ್ಲವೆ?''

"ಮಹಾಸ್ವಾಮಿ, ಭಾವಿಯಲ್ಲಿ ನೀರೂ ಇದೆ, ಹಗ್ಗಕೊಡಗಳೂ ಇವೆ. ಈ ನೀರು ನಿಮಗೆ ಸಾಲದಿದ್ದರೆ ತಾವೇ ಒಳ್ಳೇನೀರನ್ನು ಸೇದಿಕೋಬಹುದಲ್ಲ !''

''ಆಗಲೀನಯ್ಯಾ, ಹಾಗೇಮಾಡ್ತೇನೆ.''

"ಅಷ್ಟು ಇಲ್ಲದಿದ್ದರೆ ತಿಂದಿದ್ದು ಹೇಗೆ ಜೀರ್ಣವಾಗಬೇಕು?"

ನನಗೆ ತಡೆಯಲಸಾಧ್ಯವಾಯಿತು, ರಪ್ಪನೆ ಕೆನ್ನೆಗೆ ಹಾಕಿದೆ. ಕಳಕ ಕೆಳಗುರುಳಿದ. ಪಕ್ಕದಲ್ಲಿದ್ದ ಸೇವಕನೊಬ್ಬನು ಇದನ್ನು ನೋಡಿ ಕೂಗಿಕೊಂಡ. ಸುತ್ತಮುತ್ತಲಿದ್ದವರೆಲ್ಲರೂ ಅಲ್ಲಿಗೆ ಬಂದರು. ಐದಾರು ನಿಮಿಷ ಶೈತ್ಯೋಪಚಾರವಾದ ಮೇಲೆ ಕಳಕಪ್ಪ ಮೇಲ ಕ್ಕೆದ್ದ. ನಮ್ಮ ತಂದೆ ಎದುರಿಗೆ ನಿಂತು ನನ್ನನ್ನು ದುರದುರ ನೋಡಿ ದರೆ, ನನ್ನ ಕಣ್ಣುಗಳಲ್ಲಿ ನೀರುಬಂದು, ನಾನು ನನ್ನ ಮುಖವನ್ನು ತಿರು ಗಿಸಿಕೊಂಡು ಒಂದು ಮೂಲೆಗೆ ಹೋಗಿಕೂತೆ. ಅದೇ ಆ ಮನೆಯಲ್ಲಿ ಊಟಮಾಡುವುದಕ್ಕೆ ಕೊನೆದಿನವೆಂದುಕೊಂಡೆ. ಆರಾತ್ರಿ ಒಬ್ಬ ರಿಗೂ ತಿಳಿಯದಂತೆ, ಅಲ್ಲಿಂದ ಪಲಾಯನ ಸೂಕ್ತವನ್ನು ಹೇಳಿದೆ.

೨.

ದೊಡ್ಡ ಪಟ್ಟಣಗಳಲ್ಲಿ ದುಡ್ಡಿರುವವರೆಗೂ ಯಾವ ಭಯವೂ ಇಲ್ಲ. ಎಲ್ಲಾ ವಿಚಾರಗಳಲ್ಲಿಯೂ ಅನುಕೂಲವೇ. ಒಳ್ಳೇ ತಿಂಡಿ, ಊಟ, ಉಪಚಾರ. ನಾನು ಮನೆಯನ್ನು ಬಿಟ್ಟು ಓಡಿ ಹೋದ ಒಂದು ವಾರದವರೆಗೂ, ನನಗೆ ಎಲ್ಲಾ ವಿಚಾರಗಳಲ್ಲಿಯೂ ಸುಖವಾಗಿಯೇ ಇದ್ದಿತು. ಪ್ರಪಂಚವೆಲ್ಲವೂ ಸುಖಮಯವೆಂದು ಕೊಂಡಿದ್ದೆ. ಎಂಟನೆಯ ದಿನ ನನ್ನ ಜೋಬಿನಲ್ಲಿದ್ದ ಹಣ ನನ್ನ ಊಟಕ್ಕೆ ಕೂಡ ಸಾಕಾಗಿರಲಿಲ್ಲ, ಅಲ್ಲಿಂದ ಮೊದಲಾಯಿತು ನನಗೆ ಯೋಚನೆಗೆ. ಅಲ್ಲಿಇಲ್ಲೀ ತಿರುಗಿದೆ, ಕೆಲಸಕ್ಕಾಗಿ ಯಾರಯಾರನ್ನೋ ಕೇಳಿದೆ ಏನೂ ಆಗಲಿಲ್ಲ. ಬೀದಿಯಲ್ಲಿ ಬರುತ್ತಿದ್ದಾಗ, ನನ್ನ ಜೊತೆ ಯಲ್ಲಿ ಮಠವನ್ನು ಬಿಟ್ಟ ಸನ್ಯಾಸಿಯನ್ನು ನೋಡಿದೆ, ಅವನು

ನೋಡಿದರೂ ನೋಡದ ಹಾಗೆ ಹೊರಟು ಹೋದ. ಇದರಲ್ಲೇನೊ ಸ್ವಾರಸ್ಯವಿರಬೇಕೆಂದುಕೊಂಡೆ. ಮನಸ್ಸಿಗೆ ಹೊಳೆಯಿತು; ಆ ಪಟ್ಟಣದಲ್ಲಿ ಇನ್ನಿದ್ದರೆ ನನ್ನನ್ನು ತೆಗೆದುಕೊಂಡು ಹೋಗಿ ಮಠದಲ್ಲಿ ಶೆರೆ ಹಾಕಿ ಬಿಡುವರೆಂದು ಸಮುದ್ರತೀರಕ್ಕೆ ಹೊರಟೆ. ಅಲ್ಲಿ ಆ ರಾತ್ರಿಯೇ ಜಿನೋವ ಪಟ್ಟಣಕ್ಕೆ ಹೋಗುವ ಒಂದು ಹಡಗನ್ನು ಕಂಡೆ. ಯಾವ ಪಟ್ಟಣವಾದರೆ ನನಗೇನು ? ಮುಖ್ಯ ಈ ಪಟ್ಟಣವನ್ನು ಬಿಟ್ಟಿದ್ದೊಂದೆಂದು ಆ ಹಡಗಿನಲ್ಲಿ ಹೋಗಿ ಕೆಲಸಕ್ಕೆ ಸೇರಿದೆ. ಕೆಲವು ದಿನಗಳೊಳಗಾಗಿ ಜಿನೋವ ಪಟ್ಟಣದಲ್ಲಿ ಬಂದು ನಿಂತೆ.

ಪಟ್ಟಣದಲ್ಲಿ ಹೋಗುತ್ತಲೇ ಅಲ್ಲಿನ ಅರಮನೆಗಳನ್ನು ಗುಡಿಗಳನ್ನೂ, ಮನೋರಂಜಕವಾದ ಉದ್ಯಾನಗಳನ್ನೂ ನೋಡಿ ಮನಸಾರ ಸಂತೋಷಪಟ್ಟೆ. ಅಲ್ಲಿ ಎಲ್ಲಿಗೆ ಹೋಗಬೇಕು, ಏನು ಮಾಡಬೇಕೆಂದು ತೋಚಲಿಲ್ಲ. ಆದರೇನು ಮುಖ್ಯವಾಗಿ ನಾನು ಸ್ವೇಚ್ಛೆಯಾಗಿದ್ದೆ. ಆ ಹಾಳುಮಠದ ಭಯವಿಲ್ಲ. ಇತ್ತ ತಂದೆಗೆ ನನ್ನ ಅಗತ್ಯವಿಲ್ಲ. ಎರಡು ಮೂರು ದಿನಗಳೆನ್ನುವ ಹೊತ್ತಿಗೆ, ನನ್ನ ಹತ್ತಿರ ಇದ್ದ ಹಣವೆಲ್ಲಾ ಮಾಯವಾಯಿತು. ಎಲ್ಲಿಗೆ ಹೋಗಿ ಭಿಕ್ಷೆ ಬೇಡುವುದು! ಈ ಯೋಚನೆಯಲ್ಲಿ ಮುಂಚೆ ನನಗೆ ಬಹಳ ರಮ್ಯವಾಗಿ ಕಾಣುತ್ತಿದ್ದ ಮನೆಗಳೂ ಬೀದಿಗಳೂ ಎಲ್ಲವೂ ಮಾಯವಾದವು. ಹೊಟ್ಟೆ ಹೊರಕೊಳ್ಳುವ ಯೋಚನೆಯೇ ಯೋಚನೆ.

ಅಲ್ಲಿ ಒಂದು ಸಣ್ಣ ಗುಡಿಯಲ್ಲಿ ಚಿತ್ರಗಾರನೊಬ್ಬನು ತನ್ನ ಚಿತ್ರವನ್ನು ಸ್ಥಾಪಿಸಲು ಅಣಿಮಾಡಿಕೊಳ್ಳುತ್ತಿದ್ದ. ಕೆಲಸಗಾರರನ್ನು ಅದನ್ನೇರ್ಪಡಿಸಲು ಬಿಟ್ಟಿದ್ದ. ತಾನೇ ಸ್ವತಃ ನಿಂತು ಉಸ್ತುವಾರಿ ತೆಗೆದುಕೊಳ್ಳುತ್ತಿದ್ದ. ನಾನು ಅಲ್ಲಿಗೆ ಹೋದೊಡನೆಯೇ ಆ ಚಿತ್ರ

ವನ್ನು ನೋಡಿದೆ. ನನ್ನ ಆನಸ್ಥೆಯುಲ್ಲವೂ ಮಾಯುನಾಯಿತು. ಸೊಬಗನ್ನೇ ನೋಡುತ್ತಾ ಸ್ಥಂಭೀಭೂತನಾಗಿ ನಿಂತೆ. "...
ಮುಖ? ಎಷ್ಟು ರಮ್ಯವಾಗಿದೆ!"

"ಆಯ್ಯಾ, ನಿನ್ನ ಸ್ಥಳವಾವುದು?"

"ಇಂತಹ ಚಿತ್ರವನ್ನು ಬರೆದಿರುವ ಆ ಕಲಾಪ್ರವೀಣ...
ಬಹುದು! ಆಮುಖದ ತೇಜಸ್ಸು ದೇವಲೋಕದಿಂದ ಬಂದಂ...

"ಅಯ್ಯಾ ಇಲ್ಲಿನೋಡು ನಿನ್ನನ್ನು ನೋಡಿದರೆ ಈ ಪ...
ಹೊಸಬನಾಗಿ ಕಾಣುತ್ತಿ, ನಿನ್ನ ದೇಶವಾವುದು?"

"ನಾನು ನೇಪಲ್ಸಿನವನು. ಅಲ್ಲಿ ಇಲ್ಲಿ ತಿರುಗಾಡುತ್ತ...
ಬಂದೆ. ಇಂತಹ ರಮ್ಯವಾದ ಚಿತ್ರ.................."

"ಎಲ್ಲಿಗೆ ಹೋಗಲು ಬಂದೆ?"

"ಗೊತ್ತಿಲ್ಲ. ನನಗೆ ಮನೆ ಮಠಗಳಾವುವೂ ಇಲ್ಲ"

"ಮಗೂ, ನಿನ್ನನ್ನು ನೋಡಿದರೆ ಚಿತ್ರಕಲೆಯಲ್ಲಿ ಕೇವಲ...
ನಾಗಿರುವನಂತೆ ಕಾಣುತ್ತೆ ನನ್ನಲ್ಲಿರುವೆಯಾ?"

"ನೀನು ಯಾರು?"

"ನಾನೇ ಆ ಚಿತ್ರವನ್ನು ಬರೆದವನು. ನಾನು ...
ನಾಗುತ್ತ ಬಂದೆ. ನನಗೊಬ್ಬ ಶಿಷ್ಯ........."

"ಓಹೋ, ಆಗತ್ಯವಾಗಿ ಆಗಲಿ. ನನ್ನ ಜನ್ಮ...
ನಾಯಿತು."

ಆತನಿಗೆ ನನ್ನ ತಾತನಷ್ಟು ವಯಸ್ಸಾಗಿದ್ದುದರಿಂದ ಆತನನ್ನು ತಾತನೆಂದು ಕರೆಯಲು ಮೊದಲು ಮಾಡಿದೆ. ಒಂದು ವರ್ಷವೆನ್ನುವುದರೊಳಗಾಗಿ ನಾವು ನಿಜವಾಗಿಯೂ ತಾತ ಮೊಮ್ಮಕ್ಕಳಂತೆ ಇರಲಾರಂಭಿಸಿದೆವು. ಹೀಗಿರಲು ಒಂದು ದಿನ ಒಂದು ಚಿತ್ರವನ್ನು ನಿರ್ಮಾಣಮಾಡಲು ನಮ್ಮಲ್ಲಿಗೆ ಒಂದು ಹುಡುಗಿಯನ್ನು ಕರೆದುಕೊಂಡು ಬಂದರು. ಅವಳನ್ನು ನನ್ನಂತೆಯೇ ಅವಳ ತಂದೆಯು ಬೇರೆಯವರ ಮನೆಯಲ್ಲಿ ಬೆಳೆಯುವಂತೆ ಬಿಟ್ಟಿದ್ದನೆಂದು ತೋರುತ್ತೆ. ಅವಳ ಮುಖದಲ್ಲಿ ಒಂದು ವಿಧವಾದ ತೇಜಸ್ಸಿದ್ದಾಗ್ಯೂ ಮನೆಯಲ್ಲಿ ತುಂಬ ಕಾಯಿಲೆಗಳಿಂದ ಪೋಷಿತಳಾದವಳಂತೆ ಕಾಣುತ್ತಿರಲಿಲ್ಲ. ಅವಳನ್ನು ನೋಡಿದೊಡನೆಯೇ ನನ್ನ ಮನಸ್ಸು ನನ್ನನ್ನು ಬಿಟ್ಟು ಅವಳನ್ನು ಸೇರಿತು. ಇದನ್ನೇ ನೋಡಿ ತಾತ, "ಮಗೂ, ಇವಳ ಚಿತ್ರವನ್ನು ನೀನೇ ಬರೆಯುವಿಯೇನೊ?" ಎಂದನು.

ನಾನು ಮೆಲ್ಲನೆ "ನಿಮ್ಮ ಅನುಮತಿಯಿತ್ತಲ್ಲಿ" ಎಂದೆ.

"ಅನುಮತಿ ಕೊಡದಿದ್ದರೆ?"

ನನ್ನ ಮುಖವು ಜೋಲು ಬಿತ್ತು. ಅದನ್ನು ನೋಡಿ ತಾತ ನಿಂತೆಂದನು. ಮಗೂ, ಇವಳ ಚಿತ್ರವನ್ನು ರಮ್ಯವಾಗಿ ರಚಿಸಲು ನೀನೊಬ್ಬನೇ ಶಕ್ತನಲ್ಲದೆ ಮತ್ತಾರಕೈಯಿಂದಲೂ ಆಗತಕ್ಕದ್ದಲ್ಲ ಮೊದಲು ಮಾಡು."

ಮೊದಲು ಮಾಡಿದ್ದೂ ಆಯಿತು, ಕೊನೆಗಂಡಿತು. ಕೊನೆಯ ದಿನ ಆಕೆಯ ಮಗ್ಗುಲಲ್ಲಿ ಕೂತು ಆಕೆಯ ಹೆಸರನ್ನು ಕೇಳಿದೆ. ನನ್ನ ಮೈಯಲ್ಲಿ ಪ್ರತಿಯೊಂದು ರಕ್ತದ ಹನಿಯೂ ಆಕೆಯ ಹೆಸರನ್ನೇ

ಹೇಳುವಂತೆ ತೋರಿತು. ಎಲ್ಲಿ ಯಾವ ಹಕ್ಕಿ ಕೂಗಿದರೂ "ಬಯಾನ್ಕಾ' "ಬಯಾನ್ಕಾ!" ಎಂದು ಕೇಳಿಬರುತ್ತಿತ್ತು. ಇನ್ನೊಂದು ವಾರದೊಳಗಾಗಿ ಚಿತ್ರಪಠವೆಲ್ಲಾ ಮುಗಿಯುತ್ತದೆ. ಆಕೆ ಬಂದು ತೆಗೆದುಕೊಂಡು ಹೋಗಿ ಬಿಡುತ್ತಾಳೆ. ನನ್ನ ಪ್ರಾಣಗಳೂ ಕೂಡ ಅವಳ ಹಿಂದೆ ಹೋಗಿ ಬಿಡಬಹುದೆಂದು ಅಂದುಕೊಳ್ಳುತ್ತಾ ಕೂತೆ. ಮಾರನೆಯದಿನ ತನ್ನ ಕೈಚೀಲವನ್ನು ಬಿಟ್ಟೆನೆಂಬ ನೆಪದಿಂದ ಬಯಾನ್ಕಾ ಮತ್ತೆ ನನ್ನನ್ನು ನೋಡಲು ಬಂದಳು. ಇದನ್ನು ಕೇಳಿದೊಡನೆಯೇ ನನಗೆ ಸ್ವಲ್ಪ ಧೈರ್ಯ ಬಂತು. ಅವಳ ಹತ್ತಿರ ಕೂತು ಅವಳನ್ನು ಧೈರ್ಯವಾಗಿ ಕೇಳಿದೆ. "ನನ್ನನ್ನು ಮದುವೆಯಾಗುವೆಯಾ, ನನ್ನ ರಮಣಿ?" ಗಂಭೀರ ಸ್ವರದಿಂದ ನುಡಿದಳು "ಅದಕ್ಕೆ ಆತಂಕವೇನೂ ಕಾಣೆ."

"ನಾವು ಬಹಳ ಬಡವ. ನನ್ನ ಪ್ರೀತಿಯೊಂದಲ್ಲದೆ ನಿನಗೆ ನಾನು ಮತ್ತಾವುದನ್ನೂ ಕೊಡಲಾರೆ."

"ನಾನೂ ಸಹ ಹಾಗೇ. ನನ್ನ ಪ್ರೀತಿಯೊಂದಲ್ಲದೆ, ನಾನೇನನ್ನೂ ತರಲಾರೆ"

"ಸ್ವರ್ಗವೇ ಕೈಗೆ ಸಿಕ್ಕಿದಂತಾಯಿತು, ಒಂದು ಗಂಟೆಕಾಲ ನಾನು ಸ್ವರ್ಗದಲ್ಲಿದ್ದಂತೆಯೇ ನನಗೆ ಭಾವನೆ. ಆದರೆ ದಾದಿ ಬಂದು ಕೂಗುತ್ತಲೇ ಬಯಾನ್ಕಾಗೆ ಎಚ್ಚರವಾಯಿತು. ಪ್ರಿಯ, ಬಹಳ ಹೊತ್ತಾಯಿತು. ನಮ್ಮ ತಾತ ಏನನ್ನುವನೋ ಹೋಗಿ ಬರುತ್ತೇನೆ. ನಾಳೆ ಇದೇ ಹೊತ್ತಿಗೆ ಬರುತ್ತೇನೆ.'

"ಆಗಲಿ ಬಯಾನ್ಕಾ, ನೀನಿಲ್ಲಿಗೆ ಮತ್ತೆ ಬರುವವರೆಗೂ, ನನಗೆ ನೆಮ್ಮದಿಯೇ ಇಲ್ಲ. ನನ್ನ ಮನಸ್ಸನ್ನು ನಿನ್ನೊಡನೆ ಕಳಿಸಿಬಿಟ್ಟೆ

ದ್ದೇನೆ. ಪ್ರಿಯೆ, ಪ್ರಪಂಚದಲ್ಲಿ ನನ್ನನ್ನು ಅತ್ಯಂತ ಭಾಗ್ಯಶಾಲಿಯನ್ನಾಗಿ ಇಂದು ನೀನು ಮಾಡಿರುವೆ!''

ಅಂದಿನ ಅಧರಾಮೃತಪಾನವನ್ನು ನೆನಿಸಿಕೊಂಡರೆ ನನ್ನಂಥ ಪುಣ್ಯಶಾಲಿಯೇ ಇಲ್ಲವೆಂದೆನಿಸುತ್ತೆ. ಆದರೆ ಅಲ್ಲಿಂದಾಚೆಗೆ ನನಗೆ ಕವಿದುಕೊಂಡ ಅಂಧಕಾರವನ್ನು ನೆನಸಿಕೊಂಡರೆ ನನ್ನ ಮೈಕೈಯೆಲ್ಲಾ ನಡುಗುತ್ತದೆ.

ಆ ರಾತ್ರಿ ನನಗೆ ನಿದ್ದೆ ಹತ್ತಲಿಲ್ಲ. ಮೇಜಿನ ಮೇಲಿದ್ದ ವೃತ್ತಪತ್ರಿಕೆಯನ್ನು ತೆಗೆದುಕೊಂಡು ನೋಡಲಾರಂಭಿಸಿದೆ. ಅದನ್ನಿವನ್ನೇ ಓದುತ್ತಾ ಹಟಾತ್ತಾಗಿ ನನ್ನ ಅಣ್ಣನು ಸತ್ತ ವರ್ತಮಾನವನ್ನು ನೋಡಿದೆ ನನಗೇನೂ ತೋಚಲಿಲ್ಲ. ಮತ್ತೆ ನನ್ನ ತಂದೆಯನ್ನು ನೋಡಲು ಹೋಗಬೇಕೇ ಅಥವಾ ಬೇಡವೆ ? ಇದೊಂದು ದೊಡ್ಡ ಸಮಸ್ಯೆಯಾಯಿತು. ಈ ವಿಚಾರದಲ್ಲಿ ತಾತನ ಮಾತಿನಂತೆ ನಡೆಯಬೇಕೆಂದು, ಹೋಗಿ ತಾತನ್ನೆಬ್ಬಿಸಿ, ವಿಚಾರವನ್ನೆಲ್ಲಾ ವಿಶದವಾಗಿ ಹೇಳಿದೆ. ತಾತನಿಗೆ ಬಹಳ ಸಂತೋಷವಾಯಿತು. ''ಮಗೂ, ಮೊದಲು ಹೊರಡು ನಿಮ್ಮ ತಂದೆಯು ಹೀಗಿರುವ ಕಾಲದಲ್ಲಿ, ನೀನಿಲ್ಲಿರುವುದು ಬಹಳ ತಪ್ಪು. ಆತನು ನಿನ್ನನ್ನು ಪ್ರೀತಿಸಲಿ ಪ್ರೀತಿಸದಿರಲಿ, ಆತನು ನಿಮ್ಮ ತಂದೆ. ನಿಮ್ಮಣ್ಣನ ತರುವಾಯ ಆತನನ್ನು ನೋಡಿಕೊಳ್ಳುವ ಭಾರವು ನಿನ್ನದೇ.''

"ತಾತ, ನಾನೊಬ್ಬನೇ ಹೋಗಲೊಲ್ಲೆ, ಪರದೇಶಿಯಾಗಿ, ಬೀದಿ ಬೀದಿಯಲ್ಲಿ ಅಲೆಯುತ್ತಿದ್ದ ನನಗೆ ಆಶ್ರಯವಿತ್ತ ನಿನ್ನನ್ನು ಬಿಟ್ಟು ಹೋಗುವುದೇ! ನೀನು ಬರುವೆಯಾದರೆ ಹೋಗುವೆನು.''

ಹೊಡೆದಾಟವು ಬಹಳವಾಗಿ ಕೊನೆಗೆ ತಾತನನ್ನೂ
ಕೊಂಡು ಊರಿಗೆ ಹೊರಟೆ ನನ್ನ ತಂದೆಯನ್ನೂ ನೋಡಿದ
ಆ ಹಿಂದಿದ್ದ ಜಬುರುದಸ್ತು ಮಾಯವಾಗಿತ್ತು. ನನ್ನನ್ನ
ನೆಯೇ ಮೊದಲು ಮೊದಲು ಗಂಭೀರದಿಂದ ಮಾತನಾಡಿ
ಕೆಲವು ನಿಮಿಷಗಳಲ್ಲೇ, ನನ್ನ ತಂದೆಯ ಕಣ್ಣಿನಲ್ಲಿ ನೀರು
ಲಾರಂಭಿಸಿತು. ನನಗೆ ತಡೆಯುವುದು ಅಸಾಧ್ಯವಾಗಿ ಅತ
ಯಲ್ಲಿ ಕುಳಿತು ನನ್ನನ್ನು ಕ್ಷಮಿಸಬೇಕೆಂದು ಕೇಳಿಕೊಂಡೆ, ತ
ತಾತನನ್ನು ಭೇಟಿಮಾಡಿಸಿದೆ. ತಾತನ ಹೆಸರನ್ನು ಕೇಳದೆ
ನನ್ನ ತಂದೆಯು ಬಹಳ ಸಂತೋಷದಿಂದ ಹಸ್ತಲಾಘವನ್ನಿ
ಮಗನಿಗೆ ಸ್ಥಳ ಕೊಟ್ಟದ್ದಕ್ಕಾಗಿ ತನ್ನ ಧನ್ಯವಾದಗಳನ್ನು
ಸಿದ್ದೂ ಆಯಿತು. ಒಂದು ಪಕ್ಷದಪರ್ಯಂತ ತಂದೆ ಬ
ಅನಂತರ ಬಯಾನ್ಕಳನ್ನು ನೋಡಲು ಹೊರಟೆ. ಜಿನೋವ
ಬಂದೆ. ಅವಳ ಮನೆಯನ್ನು ಹುಡುಕಿಕೊಂಡು ಹೋ
ಯಾರೂ ಇರಲಿಲ್ಲ. ಪಕ್ಕದ ಮನೆಯಲ್ಲಿದ್ದ ಒಬ್ಬ ಯ
ಅವಳ ಮನೆಯಲ್ಲಿದ್ದ ಮುದುಕನೊಬ್ಬನು ಸತ್ತನಂತರ
ನಾಲ್ಕೈದು ದಿನಗಳಲ್ಲಿ ಅವಳು ಮಾಯವಾದಳೆಂತಲೂ

ನಿರಾಶನಾಗಿ ಮನೆಗೆ ಹಿಂತಿರುಗಿದೆ. ಮುಂದೆ ಯ
ದರೂ ಅವಳನ್ನು ನೋಡುವೆನೆಂದು ಭರವಸೆಯಿಂದ, ಅವಳ
ನನ್ನಲ್ಲಿಯೇ ಇಟ್ಟುಕೊಂಡು ಸುಮ್ಮನಾದೆ. ಒಂದುವಾರ
ರೊಳಗಾಗಿ ನನಗೆ ನಿದ್ದೆ ಮಾಯವಾಯಿತು. ಎಲ್ಲಿನೆ
ಅವಳೇ ನನ್ನ ಕಣ್ಣಿಗೆ ಕಾಣಿಸುತ್ತಬಂದಳು. ಹುಚ್ಚು ಹಿ
ತೋರಿತು. ಮನೆಯಲ್ಲಿರಲು ಅಸಾಧ್ಯವಾಯಿತು. ಅವಳ

ಕಲು ಹೊರಟೆ. ಸುತ್ತಮುತ್ತ ಪಟ್ಟಣಗಳನ್ನೆಲ್ಲಾ ತಿರುಗಿದ್ದಾಯಿತು. ಏನೂ ಉಪಯೋಗವಾಗಲಿಲ್ಲ, ಕೊನೆಯ ಸಲ ಅವಳಿದ್ದ ಮನೆಯೊಳಕ್ಕಾದರೂ ಹೋಗಿನೋಡೋಣವೆಂದು, ಪುನಃ ಜೇಸೋವ ಪಟ್ಟಣಕ್ಕೆ ಬಂದೆ.

ಹಡಗಿನಿಂದ ಇಳಿದು ದೊಡ್ಡಬೀದಿಗೆ ಬರುತ್ತಲೇ ಒಂದು ದೊಡ್ಡ ಜನರಗುಂಪು ಕಾಣಿಸಿತು. ಹತ್ತಿರಬಂದು ನೋಡಲಾಗಿ, ಆ ಗುಂಪಿದ್ದ ಸ್ಥಳದಲ್ಲಿ ಮೇಲುಗಡೆ ಏಳನೆಯ ಅಂತಸ್ತಿನಲ್ಲಿ ಹಾಕಿದ್ದ ಒಂದು ದೊಡ್ಡ ಗಡಿಯಾರಕ್ಕೆ ಹಾಕಿದ್ದ ಕಂಬಿಗಳನ್ನು ಹಿಡಿದುಕೊಂಡು ಒಂದು ವ್ಯಕ್ತಿಯು ತೂಗಾಡುತ್ತಿತ್ತು. ದೃಷ್ಟಿಸಿನೋಡಲು ಹೆಂಗಸೆಂದು ತೋರಿತು. ಏಣಿ ಮುಂತಾದವುಗಳನ್ನು ತಂದುಹಾಕಿದರು. ಕೆಳಗಡೆ ಅಲ್ಲಿಂದ ಅವಳು ಬಿದ್ದರೂ ಘಾಯವಾಗದಂತೆ ಹಗ್ಗದ ಜಲ್ಲಿಗಳನ್ನು ತಂದು ಎತ್ತಿ ಹಿಡಿದುಕೊಂಡರು. ನಾನೂ ಹೋಗಿ ಆ ಹಗ್ಗವನ್ನು ಹಿಡಿದು ಕೊಂಡೆ. ಸ್ವಲ್ಪ ಹೊತ್ತಿನಲ್ಲಿಯೇ, ಮೇಲಿನಿಂದ ಹೆಂಗಸು ಬಿದ್ದಳು. ಮುಖಕಾಣಿಸಿತು. ತಕ್ಷಣವೇ ಮುಂದಕ್ಕೆ ನುಗ್ಗಿ ಎತ್ತಿಕೊಳ್ಳಲು ಹೊರಟೆ. ಅವರು ಇವರು ಸಹಾಯಕ್ಕೆ ಬಂದರು. ಎತ್ತಿಕೊಂಡು ಬಂದು, ಪಕ್ಕದಮನೆಯಲ್ಲಿದ್ದ ಒಂದು ಮಂಚದಮೇಲೆ ಮಲಗಿಸಿದೆ. ಮುಖವನ್ನೆಲ್ಲೋ ನೋಡಿದಹಾಗಿತ್ತು. ಪುನಃ ನೋಡಿದೆ-ಅವಳೇ, ನನ್ನ ಬಯಾನ್ಕಾ. ಶೈತ್ಯೋಪಚಾರಗಳಾದ ಮೇಲೆ ಕಣ್ಣುಗಳನ್ನು ಬಿಟ್ಟಳು. ನನ್ನನ್ನು ನೋಡಿ ಬಾಯಿಂದ ಅದುಮಿಕೊಂಡಳು.

''ಬಯಾನ್ಕ''

''ಮುಟ್ಟಬೇಡ. ನನ್ನನ್ನು ಮನೆಗೆ ಸಾಗಿಸು''.

"ನಿನ್ನ ಮನೆ ಎಲ್ಲಿ'

"ಮೇಲುಗಡೆ, ಆರನೆಯ ಮಹಡಿ."

ನಾನು ಅವಳನ್ನೆತ್ತಿಕೊಂಡೆ. ನನ್ನ ಪಕ್ಕದಲ್ಲಿದ್ದ ಒಬ್ಬನು ಬಂದು ನನ್ನ ಕೈಯಿಂದ ಅವಳನ್ನೆತ್ತಿಕೊಳ್ಳಲು ಪ್ರಯತ್ನಪಟ್ಟ. ನಾನು ಕೊಡುವುದಿಲ್ಲವೆಂದೆ. ಬಯಾನಾಕ್ಕ ಕಣ್ಣುಗಳಲ್ಲಿ ನೀರುಹಾಕಿ ಕೊಳ್ಳುತ್ತಾ,

"ಈತನು ನನ್ನ ಗಂಡ ಎಂದಳು," ನಾನು ಅವಳನ್ನೆತ್ತಿ ಆತನ ಕೈಯಲ್ಲಿಟ್ಟು ಬಿಟ್ಟೆ."



# ಚರ್ಮದ ದಪ್ಪ.

---

"ಈ ಸಿದ್ದನ್ನ ಏನು ಮಾಡೋದು!"

"ಏನಾದರೂ ಮಾಡಬೇಕು, ರಾಯರೇ."

'ಏನು ಮಾಡೋದೋ, ಚರ್ಮದ ದಪ್ಪ! ನಾನು ಬೇರೆ ಕಾಣೆ ಈಗ ಆರು ತಿಂಗಳಿಂದ ಹೇಳ್ತಾಯಿದ್ದೇನೆ-ರಿಪೋರ್ಟು ಬರಿಯೋದನ್ನ! ಮನ್ನೆಯಲ್ಲಾ ಈ ರಿಪೋರ್ಟು ಬರಿಯೋವಿಧ ಹೇಳ್ತಾನೇ ನಾಲ್ಕು ಗಂಟೆ ಹೊತ್ತು ಅವನ ಸಂಗಡ ಹೊಡೆಕೊಂಡೆ. ಇವತ್ತು ತಿರುಗಿ ಬರೆದಿದ್ದಾನೆ-ನೋಡಿ!''

ರಾಯರು ಪೋಲೀಸು ಅಧಿಕಾರಿಗಳು. ಹೊಸದಾಗಿ ಪೋಲೀಸಿಗೆ ಸೇರಿಸಿಕೊಂಡವರನ್ನು ತರಬೇತು ಮಾಡಲು ಇವರ ಕೈಕೆಳಗೆ ಹಾಕಿದ್ದರು. ಇವರು 'ಬೂಡ್ಸು'ಕಟ್ಟೋದು ಮೊದಲುಗೊಂಡು ರಿಪೋರ್ಟು ಬರೆಯೋವರೆಗೂ ಅವರಿಗೆ ಹೇಳಿಕೊಡಬೇಕಾಗಿತ್ತು. ಅವರ ಪೈಕಿ ಸಿದ್ದನಂತಾ ಪುರುಷ ಹಿಂದೆ ಯಾನಾಗಲೂ ಬಂದಿರಲಿಲ್ಲ. ಮುಂದೆಯೂ ಬರೋ ಹಾಗಿಲ್ಲವೆಂಬುದೇ ಅವರ ಮತ. ಆದಾಗ್ಯೂ ಏನು ಮಾಡಲು ಸಾಧ್ಯ?

'ನಾ ಲಾಯಖ್' ಎಂದು ಕಳಿಸಿಬಿಡೋದಕ್ಕೆ ಸಿದ್ದನಿಗೆ ದೊಡ್ಡವರ ಬೆಂಬಲ. ಅವನು ಇವಕ್ಕೆ ಸರಿಯಾದ ಆಳು ಎಂದು ಅವರೇ 'ರೆಕಮಂಡೇಷನ್' ಕಳಿಸಿಕೊಟ್ಟಾಗ, ಈ ಅಧಿಕಾರಿಗಳು ಇವನನ್ನು ಆಚೆ ತಳ್ಳುವುದಕ್ಕಾದೀತೆ! ಸಿದ್ದನ ಎದೆ ಸುತ್ತಳತೆ ನಲವತ್ತು ಮೂರು

ಅಂಗುಲ. ಮೈಕೈಯುಲ್ಲಾ ಕಬ್ಬಿಣದ ಗಟ್ಟಿ. ತಲೆ ಆಕಾರಕ್ಕೆ ಚಿಕ್ಕದು: ಒಳಗಡೆ ಜೇಡೀ ಮಣ್ಣು. ಒಂದು ಹಂಡೆಯ ತುಂಬ. ನೀರು ತುಂಬಿ 'ಎಲಾ ಸಿದ್ದ, ಇದನ್ನ ಸ್ವಲ್ಪ ಪಾಕ್ಕಟ್ಟಿನವರೆಗೆ ಸಾಗಿಸೋ' ಎಂದರೆ, 'ಆಗಲಮ್ಮಣ್ಣಿ, ಏನ್ಪಾಮಾದಾ, ಏನ್ಸಾಮಾದ ಒಂದು ಮೈಲಿ ತಾನೆ'ಎನ್ನುತ್ತಿದ್ದ. ಆದರೆ **ರಿಪೋರ್ಟು** ಬರಿಯೋದೇ —ಅವನಿಗೆ ದೊಡ್ಡವೊಂದು ಕಬ್ಬಿಣದ ಹಾರೆ ನುಂಗು ಎಂದು ಹೇಳಿದ ಹಾಗೆ ಆಗಿತ್ತು.

ರಾಯರು ಇವನಿಗೆ ಒಂದು ಪ್ರಶ್ನೆ ಹಾಕಿ **ರಿಪೋರ್ಟು** ಬರಿ ಎಂದಿದ್ದರು. "ಕನ್ನ ಹೊಡೆಯುತ್ತಲಿರುವ ಕಳ್ಳರಿಬ್ಬರನ್ನು ಕಂಡಲ್ಲಿ ಏನು ಮಾಡುತ್ತಿ? ಇದಕ್ಕೆ **ರಿಪೋರ್ಟು** ಬರೆ." ಅವನೂ ಬರೆದಿದ್ದ "ಕನ್ನ ಬಡೀತೀರೋ ಕಳ್ರಬ್ರನ್ನ ಕಂಡಿ ಬಿಮ್ಮನೆ ಬಿಗಿದಾಪ್ಟಿ ಇಡ್ಕೊಂಡ"

ಇದನ್ನು ರಾಯರು ತಮ್ಮ ಸ್ನೇಹಿತರ ಕೈಗೆ ಕೊಟ್ಟರು. ಸ್ನೇಹಿತರು ನೋಡಿ, 'ಆಗಲಿ ರಾಯರೇ, ಏನೋ ಬರೆದಿದ್ದಾನೆ. ಏನೋ ಟೆಂಪರರೀಗಿಂಪರರೀ— ' ಎಂದರು.

'ಆಗಲಪ್ಪ—ಟೆಂಪರ್ ವರೀ ನೇ!'

ಹಾಗೂ ಹೀಗೂ ಸಿದ್ದ ಪೋಲೀಸಿನೋನಾದ. ರಾತ್ರಿ ಒಂದು ಗಲ್ಲೀಲಿ 'ಬೀಟ್' ಗೆ ಹಾಕಿದರು. ಅವನ ಸಂತೋಷವೇ ಸಂತೋಷ, ಆ ಕಾಕಿ ಚಟ್ಟೆ, ಆ ಪೋಷಾಕು ಎಷ್ಟಾವರ್ತಿ ನೋಡಿಕೊಂಡರೂ ಸಾಲದು. ಜೊತೆಗೆ ಕಾಲಿಗೆ ಬೂಡ್ಸು. ಇದೇನೋ ತೊಂದರೆ ಕೊಡುತ್ತಾ ಇತ್ತು ಎನ್ನಿ. ಆದಾಗ್ಯೂ ಪಕ್ಕದ ಮನೇ ಅಣ್ಣೀಗೆ ಇದೆಲ್ಲಿಂದ ಬರಬೇಕು ! ಆದರೆ ಒಂದು ಮಟ್ಟಿಗೆ ಅವನಿಗೆ ದೊಡ್ಡ

ಯೋಚನೆಯಾಗಿತ್ತು — ಸರಿಯಾಗಿ ರಿಪೋರ್ಟು ಬರಿಯದೆಯಿದ್ದರೆ ಕೆಲಸ ಹೋಗಿ ಬಿಡುತ್ತಲ್ಲಾ, ಎಂಬುದು.

ರಾತ್ರಿ ಹನ್ನೆರಡು ಗಂಟೆ. ಎಲ್ಲೋ 'ಟಕ್-ಟಕ್' ಶಬ್ದ. ಏನಿರಬಹುದು? ಪಕ್ಕದಮನೆಯಲ್ಲೆಲ್ಲೋ ಹಲ್ಲೇ ಶಬ್ದ. ಅಷ್ಟು ಜೋರಾಗಿ! ಮತ್ತೆ ಕೇಳಿಸಿತು. 'ಖರ್-ಖರ್' ಎಲ್ಲೋ ಏನೋ ನಡೀತಾಯಿದೆ. ನೋಡಬೇಕು.

ಸಿದ್ದ ಹೊರಟ. ಮನೆಯ ಹತ್ತಿರ ಹೋಗಿ ನೋಡಿದ. ಮುಂದು ಗಡೆ ಬಾಗಿಲಿಗೆ ಬೀಗ ಹಾಕಿದೆ, ಪಕ್ಕದಲ್ಲಿದ್ದ ಕಿಟಕಿಯಲ್ಲಿ ಬಗ್ಗಿ ನೋಡಿದ ಒಳಗಡೆ ಸಣ್ಣದೊಂದು ದೀಪ. ಯಾರೋ ಇಬ್ಬರು. ಇವನು ನೋಡೋದಕ್ಕೂ ಒಳಗೆ ಪೆಟ್ಟಿಗೆ ಮುಚ್ಚಳ ತೆಗೆಯೋದಕ್ಕೂ ಸರಿಹೋಯಿತು. ಹಾಗೇ ಒಂದೇ ಹುನ್ನರ್‌ನಲ್ಲೇ ಕಿಟಕಿ ಕನ್ನಡಿ ಒಡೆದುಕೊಂಡು ಸಿದ್ದ ಒಳಗೆ ದೂರೇ ದೂರಿದ.

ಅಲ್ಲಿದ್ದ ಇಬ್ಬರಲ್ಲಿ ಒಬ್ಬನ ಕಣ್ಣಿಗೆ ಬಿತ್ತು; ಕೂಡಲೇ ತನ್ನ ಕೈಲಿದ್ದ ಚಾಕು, ತೋರಿಸಿ, ಹತ್ತಿರ ಬಂದರೆ ಇರಿಯುತ್ತೇನೆಂದ. ಸಿದ್ದನಿಗಿದೊಂದು ಲಕ್ಷ್ಯವೇ! ಹಿಂದೆ ರಾಯರು 'ಕಳಾಸಿ' ನಲ್ಲಿ ಇಂಥಾ ಹೊತ್ತಿನಲ್ಲಿ ಏನೇನೋ ಮಾಡಬೇಕೆಂದು ಹೇಳಿದ್ದರು ಸಿದ್ದನ ತಲೆಯಲ್ಲಿ ಇವುಗಳೇನೂ ನಿಂತಿರಲ್ಲಿಲ್ಲ. ಹಾಗೇ ಸೊಂಟಕ್ಕೆ ಕೈಹಾಕಿಕೊಂಡುನೋಡಿದ; ದೊಣ್ಣೆ ಅಲ್ಲಿರಲಿಲ್ಲ. ಓಹೋ ಜ್ಞಾಪಕಕ್ಕೆ ಬಂತು. ತಾನು ಸ್ವಲ್ಪ ವಿಶ್ರಮಿಸಿಕೊಂಡಿದ್ದ ಆ ಕಲ್ಲಿನ ಮೇಲೆ, ಅದನ್ನು ಬಿಟ್ಟಿದ್ದ. ಏನು ಮಾಡೋದು?

'ಬಿಡಲೇ, ಮಗನೆ—'ಎಂದ; ಸಿದ್ದ ನುಗ್ಗಿ ಅವನ ಮೇಲೆ ಬಿದ್ದ. ಕಳ್ಳನ ಕೈಲಿದ್ದ ಚಾಕು ಇವನ ಎಡಗೈಗೆ ಚುಚ್ಚಿತು. ಸಿದ್ದನ

ತಲೆಯಿಂದ ಏಟು ತಿಂದು ಕಳ್ಳನು ಕೆಳಗುರುಳಿದ. ಅವನ ಮೇಲೆ ಸಿದ್ದ ಬಿದ್ದ. ಅಷ್ಟು ಹೊತ್ತಿಗೆ ಮತ್ತೊಬ್ಬನು ತನ್ನ ಕೈಲಿದ್ದ ಚಮ್ಮಟಿಗೆ ತೆಗೆದುಕೊಂಡು ಶಿದ್ದನನ್ನ ಹೊಡೆಯಲು ಬಂದ. ಸಿದ್ದ ಕಾಲುಗಳು ಸಮ್ಮನಿದ್ದವೆ! ಘಾತಿಸಿ ಒಂದುವತ್ತ ಬಿತ್ತು. ಅದೂ ಪಕ್ಕೆಗೇ ಬೀಳಬೇಕೇ! ಇವರಿಬ್ಬರನ್ನೂ ಚೆನ್ನಾಗಿ ಮೊದ್ದು, ಒಬ್ಬ ಕಳ್ಳನ ಪಂಚೆಯನ್ನೇ ಹರಿದು ಸಿದ್ದ ಅವರಿಬ್ಬರನ್ನೂ ಕಟ್ಟಿ, ಮೂಟೆಗಳಂತೆ ಉರುಳಿಸಿ, ಅವರ ಮೇಲೆ ಕೂತ. ಎಡಗೈ ರಕ್ತಮಯವಾಗಿ, ಎತ್ತಲು ಕಷ್ಟವಾಯಿತು. ಆದರೇನು—ರಿಪೋರ್ಟು ಬರೆಯಲೇ ಬೇಕಲ್ಲ! ಜೇಬಿನಿಂದ 'ನೋಟು—ಬುಕ್ಕು' ತೆಗೆದು ಬರಿಯಲು ಮೊದಲು ಮಾಡಿದ. ಸೀಸದಕಡ್ಡಿ ನಾಲಿಗೆಗೆ ತಗುಲಿಸಿ, ತಗುಲಿಸಿ, ಬಾಯೆಲ್ಲಾ ಬಣ್ಣವಾಯಿತು. ಕಾಗದಕ್ಕೂ ಬೊಳದಿದ್ದಾಯಿತು. ''ಹಾ-ಆ!'—ಕೈನೋವಿಗಲ್ಲ; ರಿಪೋರ್ಟು ಹೊರಡದೇ ಇದ್ದುದಕ್ಕಾಗಿ.

ಬೆಳಗಾಗುತ್ತಲೇ ಇವರು ಪೋಲೀಸರ ಕಣ್ಣಿಗೆ ಬಿದ್ದರು. ಸಿದ್ದನೂ ಬಿದ್ದಿದ್ದ. ಎಡಭುಜದಿಂದ ರಕ್ತಹರಿದಿತ್ತು; ಕೈಲಿ **ರಿಪೋರ್ಟಿತ್ತು.**

''ಕಲ್ರಿಬ್ಬ್ರನ್ನ ಕಂಡೀ, ಇಡೀಕೊಂಡಿ,''

---

# ಕಾಸಿನಸರ

---



ರದೆ ಬಹಳ ಚತುರೆ. ಒಡವರ ಮನೆಯಲ್ಲಿ ಹುಟ್ಟುವಂಥ ಹುಡುಗಿಯಲ್ಲ. ಆದಾಗ್ಯೂ ಬಡವರ ಮನೆಯಲ್ಲಿಯಲ್ಲಿಯೇ ಹುಟ್ಟಿದಳು. ಇದೇನೂ ಆಶ್ಚರ್ಯವಲ್ಲ; ಯಾರು ಎಲ್ಲಿ ಹುಟ್ಟಬಾರದೋ ಅವರು ಅಲ್ಲಿಯೇ ಹುಟ್ಟುತ್ತಾರೆ. ಯಾರಿಗೆ ಏನು ಬೇಡವೋ ಅದನ್ನು ಮಟ್ಟಿಗೆ ದೇವರು ಅವರಿಗೆ ಕೊಡುತ್ತಾನೆ. ಯಾರಿಗೆ ಏನು ಬೇಕೋ ಅದು ಮಟ್ಟಿಗೆ ಅವರಿಗೆ ಸಿಗೋದಿಲ್ಲ. ಹಾಗೆಯೇ ಶಾರದೆಗೂ ಕೂಡ, ಅವಳಿಗೆ ಬೇಕಾದ್ದೊಂದು ಬಿಟ್ಟು ಮಿಕ್ಕಿದ್ದೆಲ್ಲಾ ಇತ್ತು. ಅವಳಿಗೆ ಒಳ್ಳೆಯ ಒಡವೆಗಳು, ಶೀರೆಗಳು ಇವುಗಳ ಮೇಲೆಯೋ ಬಹಳ ಆಸೆ. ಮೋಟಾರನ್ನು ನೋಡಿದಾಗಲೆಲ್ಲಾ 'ನಾನು ಯಾವಾಗ ಹೀಗೆ ಮೋಟಾರಿನಲ್ಲಿ ಕೂತು ಕೊಳ್ಳೋದು?' ಎಂದವಳು ಮನಸ್ಸಿನಲ್ಲಿಯೇ ಅಂದುಕೊಳ್ಳುತ್ತಿದ್ದಳು

ಗಂಡಹೆಂಡರು ಅನ್ಯೋನ್ಯವಾಗಿದ್ದರೂ ಶಾರದೆಗೆ ಬಡತನದ ಕೊರತೆಯೇ ಕೊರತೆ. ಅದಕ್ಕೆ ತಕ್ಕಹಾಗೆ ಅವಳ ಸಂಗಾತಿ ಸೀತೆಗೆ ಒಳ್ಳೇ ಹಣವಂತನೇ ಸಿಕ್ಕಿದ್ದ. ಸೀತೆಯೇನೂ ಅಷ್ಟು ಚತುರೆಯಲ್ಲ. ಅವಳಿಗೆ ದೊಡ್ಡ ಮನೆ ಸೇರಿದೆನೆಂಬ ಹೆಮ್ಮೆಯಿಲ್ಲ. ಸೇರಬೇಕೆಂದು ಯಾವಾಗಲೂ ಬಯಸಿರಲಿಲ್ಲ.

ಶಾರದೆ ಗಂಡ ಗುರುರಾಯನಿಗೆ ಅಠಾರಾ ಕಛೇರಿಯಲ್ಲಿ ಗುಮಾಸ್ತೆ ಕೆಲಸ, ನಲವತ್ತು ರೂಪಾಯಿ ಸಂಬಳ. ಸಂಬಳ ಕೈಗೆ

ಬರೋದಕ್ಕಿಂತ ಮುಂಚೆಯೇ ಅದಕ್ಕೆರಡರಷ್ಟು ಖರ್ಚಾಗಿರುತ್ತಿತ್ತು. ಮೂವತ್ತು ದಿನಗಳ ಕೊನೆಗೆ ಸಂಬಳಕ್ಕೆ ರುಜು ಹಾಕುವುದು, ತೆಗೆದು ಕೊಂಡು ಬರುತ್ತಾ ದಾರಿಯಲ್ಲಿ ಎಲ್ಲಾ ಮುಗಿಸಿಕೊಂಡು, ಬಹಳ ಪ್ರಯಾಸದಿಂದ ಮನೆ ಬಾಡಿಗೆಗೆಮಟ್ಟಿಗೆ ಉಳಿಸಿಕೊಂಡು ಬರೋದು, ಇಷ್ಟರಲ್ಲಿತ್ತು. ಅವರ ದೊಡ್ಡಮ್ಮ ಅವರ ಜೊತೆಯಲ್ಲಿಲ್ಲದಿದ್ದರೆ ಮನೆ ಯಲ್ಲಿ ಕಸಾ ಬಳಿಯೋಳಿಗೆ ಕೂಡ ಕೊಡುವುದಕ್ಕೆ ದುಡ್ಡಿರುತ್ತಿರಲಿಲ್ಲ.

ಸೀತೆಯ ಮನೆಗೆ ಹೋಗಿಬಂದಾಗಲ್ಲೆಲ್ಲಾ ಅವಳ ಅದೃಷ್ಟ ವನ್ನು ನೋಡಿ ಶಾರದೆಯು ತನ್ನ ಬಡತನವನ್ನು ನೆನಸಿಕೊಂಡು ಅನ್ನಾ ಹಾರಗಳನ್ನು ಬಿಟ್ಟು, ಅಳುತ್ತಿದ್ದಳು. ತಾನೇ ಅಳಬಾರದೆಂದಂದು ಕೊಳ್ಳುವಳು; ಆದರೆ ತಡೆಯಲಾರದಷ್ಟು ದುಃಖ ಬರುತ್ತಿತ್ತು. ಅತ್ತ ಹೊರತು ಸಮಾಧಾನವಾಗುತ್ತಿರಲಿಲ್ಲ. ಎಲ್ಲಿಗೆ ಹೋಗಬೇಕಾದರೂ "ಅವರಿಗಿದ್ದ ಹಾಗೆ ನನಗಿದೆಯೇ? ನಾನೇನೆಂತ ಅವರಿಗೆಲ್ಲಾ ಮುಖ ತೋರಿಸಲಿ?" ಎಂದುಕೊಳ್ಳುತ್ತಾ ಅವಳು ಸುಮ್ಮನಾಗುತ್ತಿದ್ದಳು.

ಒಂದು ದಿನ ಗುರುರಾಯನು ಕಛೇರಿಯಿಂದ ಮನೆಗೆ ಬಂದು, ರುಮಾಲನ್ನು ತೆಗೆದು ಗೂಟಕ್ಕೆ ಹಾಕಿ, ಅಂಗಿಯನ್ನು ಬಿಚ್ಚುತ್ತಾ "ಎಲೆ! ನಮ್ಮ ರಾಮೂಗೆ ಮದುವೆಯಂತೆ, ಲಗ್ನಪತ್ರಿಕೆ ಬಂದಿದೆ" ಎಂದನು.

"ನಮ್ಮ ಗೌರಮ್ಮನ ಮಗನಿಗೇನು? ಯಾವಾಗ?"

"ಹೌದೇ! ನಾಳೆ ಪಂಚಮಿ ಲಗ್ನ. ನಾವು ನಾಡಿದ್ದೋ ಆಚೆ ನಾಡಿದ್ದೋ ಹೋಗಬೇಕು.'

"ಏನು ಹೋಗೋದೋ—ಏನೋ?"

''ಯಾಕೇ? ರಾಮೂ ಮದುವೆಗೆ ಹೋಗೋದಿಲ್ಲ ಅಂದರೇನೇ!'

''ಇಲ್ಲ ಅಂಪರೆ, ನನಗೊಂದು ಸೀರೆಯಿಲ್ಲ! ಕುಪ್ಪಸವಿಲ್ಲ, ಹೇಗೆ ಹೋಗಲಿ ನಾನು! '

''ನನಗೆ ಸಂಬಳ ಹೆಚ್ಚು ಮಾಡಿದ್ದಾರೆ. ಒಂದು ವರ್ಷದ ಹಿಂದಿಂದು ಕೂಡ ಬರುವ ಹಾಗಿದೆ, ನೂರಿಪ್ಪತ್ತು ರೂಪಾಯಿ ಬರುತ್ತೆ. ಅದರಲ್ಲಿ ಒಂದಿಪ್ಪತ್ತು ಖರ್ಚು ಮಾಡಿದರಾಯಿತು.''

''ಇನ್ನು ನೂರು ರೂಪಾಯಿ ಏನ್ಮಾಡ್ತೀರಿ?''

''ಅದನ್ನು ಒಂದು ಕಡೆ ಇಡುತ್ತೇನೆ. ಅದರ ಜೊತೆಗೆ ಇನ್ನು ಐವತ್ತು ರೂಪಾಯಿ ಹಾಕಿ ಒಂದು ಬೈಸಿಕಲ್ ತೆಗೆಯೋಣ ಎಂದಿದ್ದೇನೆ. ನನಗೆ ನಡೆದು ನಡೆದು ಸಾಕಾಗಿದೆ?

''ಹ್ಯಾಗೂ ನನಗೆ ಸೀರೆಯಿಲ್ಲ! ಅವರಿಗೆಲ್ಲಾ ಮುಖ ತೋರಿಸೋಕೆ ನಾಚಿಕೆ.''

''ಹೋಗಲಿ, ಆ ನೂರು ರೂಪಾಯಿಗೆ ತಂದುಕೊಡುತೇನೇಳು.'

ಶಾರದೆಗೆ ಬಹಳ ಸಂತೋಷವಾಯಿತು. ಗುರುರಾಯನು ಗೊಣಗುಟ್ಟಲಿಲ್ಲ. ಶಾರದೆಯ ವಿಚಾರ ಅವನಿಗೂ ಚೆನ್ನಾಗಿ ತಿಳಿದಿತ್ತಾದ್ದರಿಂದ ಅವನಿಗೆ ಇದೇನೂ ಹೆಚ್ಚಾಗಿ ತೋರಲಿಲ್ಲ. ''ನಾನು ಅವಳಿಗಲ್ಲದೆ ಇನ್ನಾರಿಗೆ ಸಂಪಾದಿಸಿಡಬೇಕು '' ಎಂದುಕೊಳ್ಳುತ್ತಾ ಗುರುರಾಯನು ಸೀರೆಯನ್ನು ನೋಡಲು ಪೇಟೆಕಡೆ ಹೊರಟನು. ಸೀರೆಯನ್ನು ಕೊಂಡದ್ದಾಯಿತು. ಶಾರದೆಯು ಉಟ್ಟುಕೊಂಡು ಧಢಕ್ಕನೆ ಕೂತು ಎದ್ದದ್ದೂ ಆಯಿತು. ದೊಡ್ಡಮ್ಮನಿಗೆ ನಮಸ್ಕಾರ ಮಾಡಿದಳು. ''ಹೀಗೇ ಬರೋ ವರ್ಷವೂ ಒಂದುಡಮ್ಮಾ. ಲಕ್ಷಣವಾಗಿರೋಳಿಗೆ

ಒಂದು ಶೀರೆ ಸಾಕು; ವಸ್ತ್ರಗಳು ಎಷ್ಟುಬಟ್ಟರೇನು. ಎಷ್ಟು ಒಡವೆ ಹಾಕಿಕೊಂಡರೂ ಅಷ್ಟೆ!'' ಎಂದು ದೊಡ್ಡಮ್ಮನು ಆಶೀರ್ವಾದ ಮಾಡಿದ್ದೂ ಆಯಿತು. ಶಾರದೆಯು ಕನ್ನಡಿಯನ್ನು ನೋಡಿಕೊಂಡಳು ಕತ್ತು ಬಹಳ ಬರೀದಾಗಿ ಕಂಡಿತು ನಿಟ್ಟುಸಿರು ಬಿಡುತ್ತಾ ''ಅತ್ತೇ ಇದು ಒಂದೊಡವೆ ಕೂಡ ಯಿಲ್ಲ,'' ಎಂದಳು.

''ಅದಕ್ಕೇನೆ? ಪಕ್ಕದಮನೆ ಜಾನಕಮ್ಮನ್ನ ಕೇಳು ನಾಲ್ಕು ದಿವಸದಮಟ್ಟಿಗೆ ಕೊಟ್ಟಿರಲಿ—ಕೊಡುತಾಳೆ.''

''ನಿಜ, ಅತ್ತೆ.''

ಶಾರದೆಗೆ ಇದು ಹೊಳದಿರಲಿಲ್ಲ. ಮಾರನೆಯ ದಿನವೇ ಜಾನಕಮ್ಮನ ಮನೆಗೆ ಶಾರದೆಯು ಹೋದಳು. ತನ್ನ ಸುಖದುಃಖವನ್ನೆಲ್ಲಾ ಹೇಳಿಕೊಂಡಳು.

ಜಾನ—ಅದಕ್ಕೇನೇ? ನನ್ನಲ್ಲಿರೋದು ಎಲ್ಲಾ ಬೇಕಾದರೂ ತಗೋಮ್ಮ''

ಶಾರ—''ಹೌದಮ್ಮ ಏನು ಮಾಡಲಿ! ಮೈಕೈಯೆಲ್ಲಾ ಬರೀದು ಹೀಗೋಗೋಕ್ಕೆ, ಅಲ್ಲವೇನಮ್ಮ ? '

ಜಾನಕಮ್ಮನು ಪೆಟ್ಟಿಗೆ ತೆಗೆದಳು. ಎದುರಿಗೆ ಕಡಗ ಕಾಣಿಸಿತು. ಶಾರದೆಯು ಅದನ್ನು ಕೈಗೆ ತೆಗೆದುಕೊಂಡಳು. ಅದನ್ನು ನೋಡುತ್ತಾ ಇದ್ದಹಾಗೆ, ಅಲ್ಲಿದ್ದ ಜೋಮಾಲಿ ಕಣ್ಣಿಗೆ ಬಿತ್ತು; ಅದನ್ನು ತೆಗೆದು ಕೊಳ್ಳುವುದಕ್ಕೆ ಕೈಹಾಕಿದಳು; ಜೋಮಾಲೆಯನ್ನು ಕೈಯಲ್ಲಿ ಹಿಡಿಯುವ ಹೊತ್ತಿಗೆ ಬಳೆ ಬಿಟ್ಟು ಹೋಯಿತು. ಇವುಗಳನ್ನು ಜೋಡಿಸುತ್ತಿದ್ದ ಹಾಗೆಯೇ ಥಳಥಳಿಸುತ್ತಿದ್ದ ಮುತ್ತಿನ ಸರ ಕಣ್ಣಿಗೆ ಕಾಣಿ

ಸಿತು. ಹೀಗೆಂಬೇ ಒಂದು ನೋಡುತ್ತಿದ್ದ ಹಾಗೆ ಮತ್ತೊಂದರಕಡೆ ದೃಷ್ಟಿಹೋಗುತ್ತಾ ದಿಕ್ಕು ತೋಚದಂತಾಯಿತು. ಹೀಗಿರುವಾಗ ಜಾನಕಮ್ಮನು "ಈ ಬೆಂಡೋಲೆ ನೋಡೆ, ಮೊನ್ನೆ ತಾನೆ ಬೊಂಬಾಯಿಗೆ ಹೋಗಿದ್ದಾಗ ತಂದರು. ಅದು ನೂರು ರೂಪಾಯಿ ಬದುಕಂತೆ ನೂರುರೂಪಾಯಿಗೆ ತಂದರು. ಈ ಕಾಸಿನ ಸರ ನೋಡು." ಎಂದು ಎರಡನ್ನೂ ಶಾರದೆಯ ಕೈಗೆ ಕೊಟ್ಟಳು.

"ಎಷ್ಟು ನೋಡಿದರೂ, ಇನ್ನೂ ನೋಡಬೇಕೆನಿಸುತ್ತೆ."

"ಶಾರದೆ, ನಿನಗೆಷ್ಟುಬೇಕೋ ತಗೋ. ನಾಲ್ಕುದಿನ; ಎಲ್ಲಿ ಹೋಗುತ್ತೆ—ಅದಕ್ಕೇನು! ಖರ್ಚು, ಸಧ್ಯ!"

"ಈ ಬೆಂಡೋಲೆ, ಕಾಸಿನಸರ ಇವೆರಡೂ ತಗೊಂಡು ಹೋಗ್ತೀನಮ್ಮ."

"ಸರಿ, ಅದಕ್ಕೇನು ಸಂಪತ್ತು. ಇಟ್ಟುಕೊಂಡು ಹೋಗು."

ಹೀಗೆನ್ನುತ್ತಾ, ಬೆಂಡೋಲೆಯನ್ನು ಶಾರದೆಯ ಕಿವಿಗಿಟ್ಟು, ಕಾಸಿನ ಸರವನ್ನು ಕುತ್ತಿಗೆಗೆ ಹಾಕಿ ಶಾರದೆಯನ್ನು ಜಾನಕಮ್ಮನು ಮನೆಗೆ ಕೊಟ್ಟು ಕಳುಹಿಸಿದಳು. ಶಾರದೆಯು ಸಂತೋಷಕ್ಕೆ ಪಾರವೇ ಇರಲಿಲ್ಲ. ಮದುವೆಗೆ ಹೋಗಲು ಬೇಕಾದುದನ್ನು ಒಂದು ನಿಮಿಷದಲ್ಲಿ ಅಣಿಮಾಡಿದಳು. ಸಲಸಲಕ್ಕೂ, "ಅಯ್ಯೋ, ಇಂಥಾದ್ದು ಒಂದಾದರೂ ಇಲ್ಲವೆ — ಯಾವಾಗ ಇಂಥಾದ್ದೆಲ್ಲಾ ಇಟ್ಟುಕೊಂಡು ಸುಖವಾಗಿರುತ್ತೇನೋ ಕಾಣೆ." ಎಂದು ಹಂಬಲಿಸುತ್ತಿದ್ದಳು. ಆದಾಗ್ಯೂ, ಇನ್ನು ನಾಲ್ಕು ದಿನಗಳವರಿಗೂ ಅವೆಲ್ಲವೂ ತನ್ನದೇ ಎನ್ನುತ್ತ ಸಂತೋಷಪಡುತ್ತಿದ್ದಳು.

ರಾಮೂಗಿಂತಲೂ ಶಾರದೆಯೇ ಮದುವೆಮನೆಯಲ್ಲಿ ಸಂತೋಷದಿಂದಿದ್ದಳು. ಎಲ್ಲಿಗೆ ಹೋದರೂ ಮರ್ಯಾದೆ!-ನಡೆಯುವ ಮಾತೇ ಇಲ್ಲ! ಎಲ್ಲರಿಗೂ ಗಾಡಿಗಳು, ಅವರಲ್ಲಿ ಶಾರದೆಗಂತೂ ಎಲ್ಲರಿಗಿಂತಲೂ ಹೆಚ್ಚು ಗೌರವ. ಅವಳ ರೂಪಿಗೂ, ಲಾವಣ್ಯಕ್ಕೂ, ಕಿವಿಯಲ್ಲಿದ್ದ ಬೆಂಡೋಲೆಗೂ ಎಲ್ಲರೂ ಅವಳಕಡೆಯೇ ನೋಡುತ್ತ 'ಏನು ಕಳೆ— ಒಳ್ಳೆ ಶ್ರೀಮಂತರ ಮನೆ ಹುಡುಗಿ? ಎನ್ನುತ್ತ, ಎಲ್ಲಿಗೆ ಹೋಗಬೇಕಾದರೂ, ಏನು ಮಾಡಬೇಕಾದರೂ, ಅವಳ ಸಹಾಯಕ್ಕೆ ಜನರು ಬರುತ್ತಿದ್ದರು. ರಾಮುವಾದರೋ, 'ಶಾರದೆ ನೀಬಂದಿದ್ದೆ ಹೆಚ್ಚಮ್ಮ' ಎಂದುಪಚಾರ ಹೇಳುತ್ತ ಎಲ್ಲರಿಗೂ ಉಪಚಾರ ಹೇಳುವಂತೆ ಶಾರದೆಗೆ ಹೇಳುತ್ತಿದ್ದನು.

ಇದ್ದ ಎರಡು ದಿನಗಳು ಎರಡು ನಿಮಿಷಗಳಂತೆ ಕಳೆದು ಹೋದವು. ನಾಲ್ಕನೆಯ ದಿನ ಹಿಂತಿರುಗಿ ಊರಿಗೆ ಬಂದು ಸೇರಿದರು. ಶಾರದೆಯು ಮನೆಯ ಮೆಟ್ಟಲು ಹತ್ತುತ್ತಾ, ಹಿಂದಿನ ಎರಡು ದಿವಸಗಳನ್ನು ನೆನೆಸುತ್ತಾ ನಿಟ್ಟುಸಿರು ಬಿಟ್ಟಳು.

''ಎಲ್ಲೇ, ಗಾಡಿಯೋನಿಗೆ ದುಡ್ಡು ಕೊಡಬೇಕಲ್ಲೇ.''

''ಇಗೋ, ಪೆಟ್ಟಿಗೆ ತೆಗೆದುಕೊಡುತ್ತೇನೆ.''

ಬೇಗದ ಕೈಯ್ಯನ್ನು ತೆಗೆದುಕೊಳ್ಳಲು ಕುತ್ತಿಗೆಗೆ ಕೈಹಾಕಿದಳು, ಸರ ಸಿಗಲಿಲ್ಲ. ಹುಡುಕಿದಳು-ಅದು ಅಲ್ಲಿರಲಿಲ್ಲ! ಮುಖ ಪೆಚ್ಚಾಯಿತು!

''ಏನೇ—''

''ಏನೂ ಇಲ್ಲ—ಕಾಸಿನ-ಸರ-ಇಲ್ಲ,''

''ಎಲ್ಲಿ ಹೋಯಿತೇ? ಗಾಡಿಯಲ್ಲೇನಾದರೂ...''

ಎನ್ನುತ್ತ ಗುರುರಾಯನು ಗಾಡಿಯೊಳಗೆ ನೋಡಿದನು. ಹಾಸಿದ ಜಮಖಾನೆಯನ್ನು ಸುತ್ತಿ ಈಚೆಗೆ ತೆಗೆದು ನೋಡಿದನು. ಅಲ್ಲಿ ಏನೂ ಇರಲಿಲ್ಲ. ಅಷ್ಟು ಹೊತ್ತಿಗೆ ಒಳಗಿನಿಂದ ದೊಡ್ಡಮ್ಮ ಬಂದು ಆರಾಣೆ ಬಾಡಿಗೆ ಗಾಡಿಯವನಿಗೆ ಕೊಟ್ಟಳು.

"ದಾರಿಯಲ್ಲೇನಾದರೂ ಬಿದ್ದು ಹೋಯಿತೋ—ನಾನು ರೈಲ್ವೆ ಸ್ಟೇಷನವರವಿಗೂ ಹೋಗಿ ನೋಡಿಕೊಂಡು ಬರುತ್ತೇನೆ."

ಅದೂ ಆಯಿತು. ಎಲ್ಲಿಯೂ ಸಿಕ್ಕಲಿಲ್ಲ. ಏನೂ ಜ್ಞಾಪಕಕ್ಕೆ ಬರಲಿಲ್ಲ. ಶಾರದೆಯು ಮಂಕು ಬಡಿದಂತೆ ಕೂತಳು. ಪೋಲಿಸಿನವರಿಗೆ ರೈಲಿನಲ್ಲಿ ಬಿಟ್ಟಿರಬಹುದೆಂದು ತಿಳಿಸಿ, ರಾಮೂಗೂ 'ಟೆಲಿಗ್ರಾಂ' ಕೊಟ್ಟು ಗುರುರಾಯನು ಮನೆಗೆ ಹಿಂತಿರುಗಿ ಬಂದನು.

ಗುರು—"ಏನೇ, ಜಾನಕಮ್ಮನಿಗೆ ಹೇಳು!—ಕೊಂಡಿ ಕಿತ್ತು ಹೋಗಿದೆ. ಈ ವಾರದೊಳಗಾಗಿ ಹಾಕಿಸಿ ಕೊಡುತ್ತೇನೆಂದು—"

ಶಾರದೆ—"ಆಗಲಿ—"

ಶಾರದೆಯ ಧ್ವನಿಯು ಕುಗ್ಗಿ, ಅವಳೇ ಅಂದಳೋ ಅಥವಾ ಮತ್ತಾರಾದರೂ ಹೇಳಿದರೋ ಅವನಿಗೆ ಸಂಶಯವಾಯಿತು.

ಗುರುರಾಯನು ಅಂಗಡಿ ಅಂಗಡಿಯಲ್ಲಿಯೂ ಹುಡಿಕಿ, ಕೊನೆಗೆ ಅದರಂತೆಯೇ ಇದ್ದ ಸರವೊಂದನ್ನು ಒಂದು ಅಂಗಡಿಯಲ್ಲಿ ಕಂಡನು. ಅದರ ಬೆಲೆಯನ್ನು ವಿಚಾರಿಸಲು ಸಾವಿರದ ಇನ್ನೂರು ರೂಪಾಯಿಗಳೆಂದು ತಿಳಿಯ ಬಂದಿತು. ಮಾಡತಕ್ಕದ್ದೇನು? ಫಂಡಾಫೀಸಿಗೆ (Fund Office) ಹೋಗಿ ಸಾವಿರದ ಇನ್ನೂರನ್ನು ಸಾಲಾ ತೆಗೆದು

ಕೊಂಡು, ಆ ಸರವನ್ನು ಕೊಂಡುಕೊಂಡು ಬಂದು ಹೆಂಡತಿಯ ಮುಂದಿಟ್ಟನು. ಹೆಂಡತಿಯೋ ಮಾತನಾಡದೆ, ಕಣ್ಣಿನಲ್ಲಿ ನೀರು ಸುರಿಸುತ್ತಾ ಅದನ್ನು ತೆಗೆದು ಪೆಟ್ಟಿಗೆಯೊಳಗಿಟ್ಟುಕೊಂಡು ಬೆಳಗಾಗುತ್ತಲೇ ಜಾನಕಮ್ಮನ ಮನೆಗೆ ಹೋಗಿ, ಅದನ್ನೂ ಬೆಂಡೋಲೆಯನ್ನೂ ಕೊಟ್ಟಳು. ಜಾನಕಮ್ಮನು ಅದನ್ನೂ ಇದನ್ನೂ ಕೇಳುತ್ತಾ ಇವುಗಳನ್ನು ತೆಗೆದು ಕೊಂಡು ಪೆಟ್ಟಿಗೆಯೊಳಗಿಟ್ಟಳು. ಶಾರದೆಗಾದರೋ, ಎಲ್ಲಿ ತನ್ನ ಹಾರವಲ್ಲವೆನ್ನುತ್ತಾಳೋ ಎಂದು ಭಯ! ಇವಳು ಅವೆರಡನ್ನೂ ಪೆಟ್ಟಿಗೆ ಯೊಳಗಿಟ್ಟೊಡನೆಯೇ ಶಾರದೆಗೆ ತಲೆಯಮೇಲಿದ್ದ ದೊಡ್ಡ ಹೊರೆ ಇಳಿದಂತಾಯಿತು. ಸ್ವಲ್ಪ ಹೊತ್ತು ಮಾತನಾಡಿ ಶಾರದೆಯು ಹಿಂತಿರುಗಿ ಮನೆಗೆ ಬಂದಳು.

ಅಂದಿನಿಂದಾಚೆಗೆ, ಬೆಳಿಗ್ಗೆ ಆರು ಗಂಟೆಯಿಂದ ರಾತ್ರಿ ಹನ್ನೆರಡು ಗಂಟೆವರಿವಿಗೂ ಗುರುರಾಯನು ದುಡಿಯಬೇಕಾಗಿ ಬಂದಿತು. ಮಂಡಿಯಲ್ಲಿ ಲೆಖ್ಖ ಬರೆಯುತ್ತ, ಕಛೇರಿಯಲ್ಲಿ ಕೆಲಸಮಾಡಿದ ಮೇಲೆ ಅಲ್ಲಿ ಇಲ್ಲಿ ಪಾಠ ಹೇಳುತ್ತಾ, ತನ್ನ ಮೈ ಪೋಷಣೆಯನ್ನೇ ಗಮನಿಸದೆ ಆತನು ಆ ಸಾಲವನ್ನು ತೀರಿಸುವುದರಲ್ಲಿಯೇ ಲೀನನಾಗಿ ದಿನೇ ದಿನೇ ಕೃಶನಾಗುತ್ತ ಬಂದನು. ಶಾರದೆಗಾದರೋ ಮನಸ್ಸೇ ಬದಲಾಯಿಸಿತು. ಮನೆಯಲ್ಲಿ ಕಸಾ ಬಳಿಯುವಳನ್ನೂ ಬಿಡಿಸಬೇಕಾಗಿ ಬಂದಿತು. ದೊಡ್ಡಮ್ಮನಾದರೋ ಏನನ್ನೂ ಮಾತನಾಡದೆ ತನ್ನ ಕೈಲಾದರೆ ಕೆಲಸವನ್ನು ಮಾಡುತ್ತಿದ್ದಳು; ಇಲ್ಲವಾದರೆ ಎಲ್ಲವನ್ನೂ ಶಾರದೆಯೇ ಮಾಡಿಕೊಳ್ಳುತ್ತಿದ್ದಳು. ಈ ಕೊರತೆಯಲ್ಲಿಯೇ ಶಾರದೆಯೂ ಕೂಡ ಕೃಶಳಾಗುತ್ತ ಬಂದಳು.

ಜಾನಕಮ್ಮನ ಗಂಡನನ್ನು ಮೈಸೂರಿಗೆ ವರ್ಗಾಯಿಸಿದ್ದರು. ಎರಡು ವರ್ಷಗಳಾದ ಮೇಲೆ ಒಂದು ದಿನ ಅವರು ಊರಿಗೆ ಬಂದಿದ್ದಾ

ರೆಂದು ಗುರುರಾಯನು ಶಾರದೆಗೆ ಹೇಳಿದನು. ಜಾನಕಮ್ಮನನ್ನು ನೋಡಲು ಶಾರದೆಯು ಹೋದಳು.

"ಜಾನಕಮ್ಮ—ಜಾನಕಮ್ಮ"

ಜಾನಕಮ್ಮನು ಈಚೆಗೆ ಬಂದಳು; ಶಾರದೆಯನ್ನು ಗುರ್ತಿಸಲಿಲ್ಲ "ಅದ್ಯಾರು? ಯಾರೋ ನನಗೆ ಗುರ್ತೇ ಶಿಕ್ಕಲಿಲ್ಲವಮ್ಮ."

"ನಾನು ಶಾರದೆ— '

''ಶಾರದೆ ಏನೇ ? ಇದೇನೇ ಹೀಗಾಗಿದ್ದೀ ? ಕೂತುಕೊ. ಇದೇನೇ ಕ್ಷಯ ಬಂದ ಹಾಗೆ ಆಗಿದ್ದೀಯಲ್ಲೇ?"

"ಹೌದಮ್ಮ—"

"ನಾವಿಲ್ಲಿಂದ ಹೋಗುವಾಗ ಹ್ಯಾಗಿದ್ದೆ?-ಗೌರಮ್ಮನಹಾಗಿದ್ದೆ ಯಲ್ಲೆ!"

ಜಾನಕಮ್ಮನು ಚಾಪೆಯನ್ನು ಹಾಸಿದಳು. ಎರಡು ಕಂಬನಿಗಳು ಕಣ್ಣುಗಳಿಂದ ಹೊರಟು ಹರಿದು ಕೆನ್ನೆಗಳ ಮೇಲೆ ಬಂದವು. ಜಾನಕಮ್ಮನು ಸೆರಗಿನಿಂದ ತನ್ನ ಬಾಯನ್ನೂ, ಕೆನ್ನೆಯನ್ನೂ ಒರೆಸಿಕೊಂಡಳು.

ಶಾರದೆಯು ಚಾಪೆಯ ಮೇಲೆ ಕುಳಿತುಕೊಂಡಳು.

"ತಡೆಯಲಾರದೆ, ನಿನ್ನೊಡನೆ ಹೇಳಲು ಬಂದೆ ಜಾನಕಮ್ಮ"

ಜಾನಕಮ್ಮನು ಪಕ್ಕದಲ್ಲಿ ಕುಳಿತುಕೊಂಡಳು 'ಏನದು-ಶಾರದೆ?

"ಜಾನಕಮ್ಮ—ರಾಮೂ ಮದುವೆಗೆ ನಿನ್ನ ಸರ ತೆಗೆದುಕೊಂಡು ಹೋದೆನಲ್ಲ."

"ಹೌದು—ನನಗೆ ಜ್ಞಾಪಕವಿದೆ."

"ಅದನ್ನು ನಾನು ಕಳೆದೆ—"

"ನಿಜವೆ ಶಾರದೆ? ಹಿಂದಕ್ಕೆ ಕೊಟ್ಟೆಯಲ್ಲ!"

"ಅದಲ್ಲ: ಅದರಂತೆಯೇ ಇದ್ದ ಮತ್ತೊಂದನ್ನು ಕೊಟ್ಟೆ"

"ಅದಕ್ಕೆ ಬದಲಾಗಿ—"

"ಹೌದು—ಅದನ್ನು ನೀನು ನೋಡಲಿಲ್ಲ—ಮಾತನಾಡುತ್ತ—ಸುಮ್ಮನೆ-ಪೆಟ್ಟಿಗೆಯಲ್ಲಿಟ್ಟೆ"

"ಏನನ್ಯಾಯ—ಅದಕ್ಕೆ ಎಷ್ಟು ಕೊಟ್ಟಿದ್ದು?"

"ಸಾವಿರದಿನ್ನೂರು—ಸಧ್ಯ ಈ ತಿಂಗಳಲ್ಲಿ ಎಲ್ಲಾ ತೀರುತ್ತೆ. ಎರಡು ವರ್ಷ ಸ್ವಲ್ಪ ಕಷ್ಟಪಟ್ಟೆವು."

"ಅಯ್ಯೊ ಹುಚ್ಚು ಹುಡುಗಿ — ಮೊದಲೇ ಹೇಳಬಾರದಿತ್ತೆ ಅದಕ್ಕೆ ನಾನು ಕೊಟ್ಟಿದ್ದದ್ದು ಐವತ್ತು ರೂಪಾಯಿ—ಗಿಲೀಟಿನ ಸರ"

